# ಅನ್ವೇಷಣೆ

ಸಂಪುಟ-೧
ಸಂಚಿಕೆ-೧
ನವಂಬರ್-೧೪,
೧೯೮೪

ಸಂಪಾದಕ : ಆರ್. ಜಿ. ಹಳ್ಳಿ ನಾಗರಾಜ್



ರೂಪಾಂತರ

ಮನಜ—ಕೆ. ವಿಜಯಲಕ್ಷ್ಮಿ—ತೇಜಸ್ವಿ ಕಟ್ಟೀಮನಿ—ಹೆಚ್. ಎಸ್. ಶಿವಪ್ರಕಾಶ್—ರಾ. ಮೂರ್ತಿ
ಆರ್. ಜಿ. ಹಳ್ಳಿ ನಾಗರಾಜ್—ಪ್ರೊ॥ ಬಿ. ವಿ. ವೀರಭದ್ರಪ್ಪ—ಜಾಣಗೆರೆ ವೆಂಕಟರಾಮಯ್ಯ
ಮೋಹನ್ ಜಿ. ಎನ್.—ಅರುಂಧ ತೇಜ ಇವರ ಬರಹಗಳು.

# ಪ್ರಗತಿಪರ ವಿಚಾರಗಳಿಗೆ 'ಅನ್ವೇಷಣೆ' ಸಾಹಿತ್ಯ ಪತ್ರಿಕೆ

ಸಂಪಾದಕ : **ಆರ್. ಜಿ. ಹಳ್ಳಿ ನಾಗರಾಜ್**

ಗೌರವ ಸಂಪಾದಕ : **ದೊಡ್ಡಹುಲ್ಲೂರು ರುಕ್ಕೋಜಿ**
ಸಹ ಸಂಪಾದಕ : **ರಾ. ಮೂರ್ತಿ**

ಮುಖಪುಟ ರೂಪಾಂತರ ಚಿತ್ರ :
**ಚಿ. ಸು. ಕೃಷ್ಣಶೆಟ್ಟಿ** (ಪರಿಚಯ : ಒಳ ಪುಟದಲ್ಲಿ)

**ಲೇಖಕರಿಗೆ ಸೂಚನೆ :** ವೈಚಾರಿಕ ಲೇಖನ, ಕತೆ, ಕವನ, ರಂಗಭೂಮಿ ಬರಹಗಳನ್ನು 'ಅನ್ವೇಷಣೆ'ಗೆ ಕಳುಹಿಸಿಕೊಡಬಹುದು. ಸ್ಪಷ್ಟವಾಗಿ ಬರೆದ ಅಥವಾ ಟೈಪ್ ಮಾಡಿದ ಬರಹಗಳನ್ನು ಕಳುಹಿಸಿ. ಪ್ರಕಟಣೆಯ ಪರಿಶೀಲನೆಗೆ ಕಳುಹಿಸುವ ಬರಹದ ಜೊತೆಗೆ ಸಾಕಷ್ಟು ಅಂಚೆ ಚೀಟಿಗಳನ್ನು ಇರಿಸಿದರೆ ಅಪ್ರಕಟಿತ ಬರಹಗಳನ್ನು ವಾಪಸ್ಸು ಕಳುಹಿಸಲಾಗುವುದು. 'ಅನ್ವೇಷಣೆ'ಯಲ್ಲಿ ಪ್ರಕಟವಾದ ಬರಹಗಳ ಬಗ್ಗೆ ಪ್ರತಿಕ್ರಿಯೆ ಕಳುಹಿಸುವವರು ಸಂಚಿಕೆ ತಲುಪಿದ ಹತ್ತು-ಹನ್ನೆರಡು ದಿನಗಳ ಒಳಗೆ ಕಳುಹಿಸಬೇಕು. ಬರಹಗಳ ಜೊತೆಗೆ ಒಂದು ಕಾರ್ಡ್ ಇರಿಸಿದರೆ ಉತ್ತರ ಬೇಗ ಲಭ್ಯ. ಮುಕ್ತ ಚರ್ಚೆಗೆ ಅವಕಾಶವಿದೆ, ಬರೆಯಿರಿ.

**ಚಂದಾ ವಿವರ :**

ವಾರ್ಷಿಕ ಚಂದಾ : 20/- ರೂ.
ಆಜೀವ ಚಂದಾ : 250/- ರೂ. (ಎರಡು ಕಂತುಗಳಲ್ಲಿ)

**ವಿಳಾಸ :** ಸಂಪಾದಕ, 'ಅನ್ವೇಷಣೆ', 37/2-ಎ, ನಿಸರ್ಗ, ನಾಗರಬಾವಿ ರಸ್ತೆ,
ವಿಜಯನಗರ-ಉತ್ತರ, ಬೆಂಗಳೂರು-560 079

# ಅನ್ವೇಷಣೆ

ಸಾಹಿತ್ಯ ಪಾಕ್ಷಿಕ

ಒಳ ಪುಟದಲ್ಲಿ....



---

**ಪ್ರಿಯರೆ,**

**'ಅನ್ವೇಷಣೆ'**—ಸಾಹಿತ್ಯ ಮಾಸಿಕವೆಂದು ಈಗಾಗಲೇ ನಾವು ಪ್ರಕಟಿಸಿದ್ದ ಕರಪತ್ರವನ್ನು ಗಮನಿಸಿದ್ದವರಿಗೆ ಈ ರೀತಿ 'ಪಾಕ್ಷಿಕ'ವಾಗಿ ಕೈ ಸೇರುವುದು ಆಶ್ಚರ್ಯವಾಗಬಹುದು. ಹೌದು, ನಮ್ಮ ಉದ್ದೇಶವೇ ಈ ಮುನ್ನ ಬೇರೆಯಿತ್ತು. ಹೀಗಾಗಿ ದೆಹಲಿಯ ವೃತ್ತ ಪತ್ರಿಕಾ ನೊಂದಣಿ ಕಛೇರಿಯಿಂದ ಬಂದ ಪಾಕ್ಷಿಕದ ಹೆಸರನ್ನು ಮಾಸಿಕವಾಗಿ ಬದಲಾಯಿಸಲು ಆ ಕೂಡಲೇ ಸಾಧ್ಯವಾಗದೇ ಹೋಗಿದ್ದರಿಂದ; ಮೂರು–ನಾಲ್ಕು ಸಂಚಿಕೆಗಳು ಎಷ್ಟೇ ಕಷ್ಟವಾದರೂ ಪಾಕ್ಷಿಕವಾಗೇ ಪ್ರಕಟವಾಗುತ್ತವೆ. ನಂತರ ಇದು ಮಾಸಿಕವಾಗಿ ಕೈ ಸೇರುತ್ತದೆ.

ಮಾಸಿಕ ಸಾಹಿತ್ಯ ಪತ್ರಿಕೆ ತರುವುದೇ ಕಷ್ಟ ಇರುವಾಗ ಇನ್ನು ಪಾಕ್ಷಿಕ ತರಲು ಸಾಧ್ಯವೆ? ಖಂಡಿತಾ ಇಲ್ಲ—ಈ ವಾಸ್ತವ ನಮಗೂ ಗೊತ್ತು. ಮೌಲಿಕವಾದದ್ದನ್ನೇ ಕೊಡಬೇಕೆಂದು ಹೊರಟ ನಮ್ಮೊಂದಿಗೆ ದಯವಿಟ್ಟು ಸಹಕರಿಸಿ.

—ಸಂಪಾದಕ

**ಸಂಪಾದಕೀಯ**

## ಒಡಲ ದನಿ....

'ಅಯ್ಯೊ ಬಿಡ್ರಿ! ಒಂದೆರಡು ಸಂಚಿಕೆ ಬರುತ್ತೆ; ಆ ಮೇಲೆ ನಿಂತೋಗುತ್ತೆ'— 'ಅನ್ವೇಷಣೆ' ಬಗ್ಗೆ ಸಾಹಿತ್ಯ ಪತ್ರಿಕೆಯೊಂದರ ಸಂಪಾದಕರ ಅಂಬೋಣ ಇದಾದರೆ, 'ಸಾಹಿತ್ಯ ಪತ್ರಿಕೆ ಬದುಕಿ ಉಳಿಯೋದೆ ಕಷ್ಟ' ಎಂಬ ಅನುಮಾನ ಕೆಲವರಿಗೆ.

ಹೌದು. ಮೇಲಿನ ಮಾತುಗಳೇನು ಮೆಜೆಸ್ಟಿಕ್ ಭವಿಷ್ಯವಲ್ಲ-ನಿಜ. ಸಾಹಿತ್ಯ ಸೇಲಾಗೋದು ಕಷ್ಟ. ಹೀಗಿರುವಾಗ ಸುಡುಸುಡುವ ಮನಸ್ಸಿನ ನಾವು ಎದೆಯುಬ್ಬಿಸಿ ಹೊರಟು 'ಅನ್ವೇಷಣೆ'ಯನ್ನು ಹುಟ್ಟು ಹಾಕುತ್ತಿದ್ದೇವೆ. ಪ್ರಸ್ತುತದ ಬಗ್ಗೆ ತಣ್ಣನೆಯ ಮಾತುಗಳಾಡಿ, ಮೌನಿಗಳಾಗುವ ಇಚ್ಛೆ ನಮಗಿಲ್ಲ!

'ಕನ್ನಡದಲ್ಲಿ ಸಾಹಿತ್ಯ ಪತ್ರಿಕೆಗಳಿಗೆ ಭವಿಷ್ಯ ಇದ್ಯ? ಸಾಹಿತ್ಯ ಪತ್ರಿಕೆ ತರೋದು ಸಾಹಸದ ಕೆಲ್ಸ ಅಲ್ವ ?- ಇದು ದೂರದ ದೆಹಲಿ ಮಿತ್ರ ಸಿ. ರಾಜಶೇಖರ್ ಮಾತು. ವಿಚಾರವಾದಿ ಡಾ॥ ಪೋಲಂಕಿ ರಾಮಮೂರ್ತಿ ತಮ್ಮ ಒಂದು ಪತ್ರದಲ್ಲಿ 'ಪತ್ರಿಕೆ ಬೆಳವಣಿಗೆಗೆ ಸಾಕಷ್ಟು ಮೂಲ ಧನ ಸಂಗ್ರಹಿಸಿದ್ದರೆ ಬಹಳ ಅನುಕೂಲ. **ನಮ್ಮ ಪತ್ರಿಕೆಗಳು ಕೇವಲ ಚಂದಾಹಣದಿಂದ ನಡೆಯುವುದು ಕಷ್ಟ;** ನೀವು ಸಾಕಷ್ಟು ಪೇಟ್ರನ್‌ಗಳ (ಜಾಹಿರಾತುಗಳನ್ನಾದರೂ) ಆರ್ಥಿಕ ಬಲವನ್ನು ಸಂಗ್ರಹಿಸಿದ್ದರೆ ಒಳ್ಳೆಯದು. ಇದು ನಿಮ್ಮ ಪತ್ರಿಕೆಯ ಭವಿಷ್ಯದ ಕಾವಲು' ಎಂದಿದ್ದಾರೆ.

ಹಲವು ಪ್ರಶ್ನೆಗಳು, ಸಲಹೆಗಳು, ಎಚ್ಚರಿಕೆಗಳು ಪತ್ರಿಕೆ ಹೊರಬರುವ ಮುನ್ನ ನಮಗೆ ತಲುಪಿವೆ. ಸಾಹಿತ್ಯ ಪತ್ರಿಕೆಗಳು ಹೇಗೆ ಬದುಕಬೇಕೆಂಬ ವಿಚಾರದಲ್ಲಿ ಉತ್ತರ ಹೇಳುವುದು ಕಷ್ಟವಾಗುತ್ತದೆ. ಮುಖ್ಯವಾಗಿ ಒಂದು ಪತ್ರಿಕೆ ಏನನ್ನು ಕೊಡುತ್ತದೆ? ಎಂಥ ಸಾಹಿತ್ಯವನ್ನು ಜನತೆಗೆ ತಲುಪಿಸುತ್ತದೆ ಅನ್ನುವುದರ ಮೇಲೆ ಆ ಪತ್ರಿಕೆಯ ಭವಿಷ್ಯ ಕೂಡ ನಿರ್ಧಾರವಾಗುತ್ತದೆಯೆಂಬ ಸಾಮಾನ್ಯ ವಿವರಣೆ ಕೊಟ್ಟರೂ; ಅದಷ್ಟೇ ನಮ್ಮೆಲ್ಲರಿಗೂ ತೃಪ್ತಿ ಕೊಡುವ ಉತ್ತರ ಖಂಡಿತಾ ಅಲ್ಲ.

'ಸಾಹಿತ್ಯ ಕೃಷಿಯಲ್ಲಿ ತೊಡಗಿದವರನ್ನಷ್ಟೇ ಈ ಸಾಹಿತ್ಯ ಪತ್ರಿಕೆಗಳು ಹೆಚ್ಚು ತಲುಪುವುದು'- ಎಂಬ ಒಂದು ಕಟು ಸತ್ಯ ಪ್ರಚಲಿತವಲ್ಲಿದೆ. ಇಂಥ ಪತ್ರಿಕೆಗಳನ್ನು ಸಾಮಾನ್ಯರೂ ಓದುವಂತೆ ಮಾಡುವುದು ಕಷ್ಟವೇ ಎನ್ನಿ. ಎಲ್ಲರನ್ನೂ ತೃಪ್ತಿ ಪಡಿಸುವಂಥ ಸಾಹಿತ್ಯ ಕೊಡಲು ಹೊರಟಾಗ ಯಾವುದೇ ನೀತಿ, ನಿಯಮ, ತತ್ವ, ಸಿದ್ಧಾಂತಕ್ಕೂ ಬದ್ಧರಾಗಿರುವುದು ಕಷ್ಟವಾಗುತ್ತದೆ. ವ್ಯಕ್ತಿಯ ಅನುಭವ, ಚಿಂತನೆಗಳು ಸಾಹಿತ್ಯದ ಪುಟಗಳನ್ನು ಅರ್ಥಪೂರ್ಣವಾಗಿಸಿ, ಸರ್ವಕಾಲಕ್ಕೂ ಶ್ರೇಷ್ಠವೆಂಬ ಸಾಹಿತ್ಯ

ವನ್ನು ಕೊಡುವುದು ಕಷ್ಟವಾದರೂ ಯಾವುದಾದರೊಂದು ಕಾಲಕ್ಕಾದರೂ ಶ್ರೇಷ್ಠ ವೆಂದು ಪರಿಗಣಿಸಬಹುದಾದ್ದನ್ನಂತೂ ಕೊಡಬಹುದು. ಆಯಾ ಕಾಲದ ಸಾಹಿತ್ಯದ ಏಳು–ಬೀಳುಗಳನ್ನು ದಾಖಲಾಗಿಸಲು. ಅದೇ ಸಂದರ್ಭದಲ್ಲಿ ಚಲಶೀಲತೆಯನ್ನು ಮೈಗೂಡಿಸಿಕೊಂಡು ಸೃಷ್ಟಿಯಾಗುತ್ತಿರುವ ಸಾಹಿತ್ಯದ ಮೌಲ್ಯಗಳನ್ನು ಕಾಪಾಡುವುದ ರಲ್ಲಿ; ನಮ್ಮ ಆಯ್ಕೆಯ ಸಾಹಿತ್ಯ ಕ್ಷೇತ್ರ ಬಹು ಮುಖ್ಯ ಪಾತ್ರ ವಹಿಸುತ್ತದೆ ಎಂಬು ದನ್ನು ನಾವು ಬಲವಾಗಿ ನಂಬಿದ್ದೇವೆ.

ಸಾಹಿತ್ಯ ನಿಂತ ನೀರಲ್ಲವಾದ್ದರಿಂದ ಅದು ತನ್ನ ಚಲನೆಯ ಗತಿಯನ್ನು ಗುರ್ತಿಸಿ ಕೊಂಡು ಸಾಗುತ್ತಲೇ ಇರುತ್ತದೆ. ಈ ಚಲನಕ್ರಿಯೆಗೆ ಬರಹಗಾರರೂ ಸ್ಪಂದಿಸು ವುದು ಅನಿವಾರ್ಯ, ಅಗತ್ಯ ಕೂಡ. ಬದುಕಿನ ಎಲ್ಲಾ ಮಗ್ಗುಲುಗಳನ್ನು ಶೋಧಿಸಿ; ಹಿಂಸೆ, ಕ್ರೌರ್ಯ, ಸಾಮಾಜಿಕ ಅಸಮಾನತೆ, ಶೋಷಣೆಗಳನ್ನು ವಾಸ್ತವ ದೃಷ್ಟಿ ಯಿಂದ ಅಧ್ಯಯಿಸಿ ಬದಲಾವಣೆಯ ಮಾರ್ಗದತ್ತ ಕೊಂಡೊಯ್ಯುವ ವಿಚಾರ ಪ್ರಚೋ ದಕ ಬರಹಗಳನ್ನು ಲೇಖಕ ಸೃಷ್ಟಿಸಬೇಕಾಗುತ್ತದೆ.

ನವ್ಯೋತ್ತರ ಕನ್ನಡ ಸಾಹಿತ್ಯ ವಿಸ್ತರಿಸಿಕೊಳ್ಳುತ್ತಿರುವ ಬದುಕಿನ ವಿವಿಧ ಆಯಾಮ ಗಳ ಬಗ್ಗೆ ನಮ್ಮ ಇತ್ತೀಚಿನ ಬರಹಗಾರರ ವಿಮರ್ಶಾ ಮಾನದಂಡಗಳು ಹೊಸ ಕಳೆ ಯಿಂದ ಲಕಲಕಿಸುವ ಅಗತ್ಯತೆಯನ್ನು ದಟ್ಟವಾಗಿ ದೃಢಪಡಿಸುತ್ತ, ಸಾಹಿತ್ಯ ವಲಯ ದಲ್ಲಿ ಅಂಥಹ ಒಂದು ವಾತಾವರಣವನ್ನು ತೀವ್ರ ಕಾಳಜಿಯಿಂದ ನಿರ್ಮಾಪಿಸುವ ಆಸೆ ಅನ್ವೇಷಣೆಗೆ. ಯುವ ಲೇಖಕರನ್ನು ಗುರ್ತಿಸುವುದು ಅನ್ವೇಷಣೆಯ ಉದ್ದೇಶ. ಪ್ರಗತಿ ಪರ ವಿಚಾರಗಳು ನಮ್ಮ ಬೆಳವಣಿಗೆಯನ್ನು, ಬದಲಾವಣೆಯನ್ನು ಗುರ್ತಿಸುವುದರಿಂದ; ನೆಲದ ಬದುಕಿನಲ್ಲಿ ನೋವುಂಡವರು ಕಲೆತು ಸಾಧಿಸಬೇಕಾದ್ದು ಸಾಕಷ್ಟಿವೆ. ಆಕಾಶದಲ್ಲೇ ಸಂಚರಿಸುವವರ ಬಗ್ಗೆ ನಾವು ಮಾತನಾಡುವುದಿಲ್ಲ. ನಮ್ಮೊಂದಿಗೆ ಹೆಜ್ಜೆ ಹಾಕುವವ ರೊಂದಿಗೆ ಅವರ ನೋವು–ನಲಿವುಗಳೊಂದಿಗೆ ನಮ್ಮ ಚಿಂತನೆಯ ಬೆಸುಗೆ.

ಈ ಸಂದರ್ಭದಲ್ಲಿ ಕನ್ನಡದಲ್ಲಿ ಪ್ರಕಟಗೊಳ್ಳುತ್ತಿರುವ ಸಾಹಿತ್ಯ ಪತ್ರಿಕೆಗಳ ಕುರಿತು ಮಾತನಾಡುವುದು ಸಂದರ್ಭೋಚಿತ: ಸುಮಾರು ೨೦ ವರ್ಷಗಳಿಂದ ಧಾರ ವಾಡದಿಂದ ಚಂದ್ರಶೇಖರ ಪಾಟೀಲರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿರುವ 'ಸಂಕ್ರಮಣ'* ವೈಚಾರಿಕ, ಪ್ರಗತಿಪರ ಮತ್ತು ನಿಷ್ಪಕ್ಷಪಾತ ವಿಚಾರಗಳನ್ನು ಹುಟ್ಟಿ ನಿಂದಲೂ ಕೊಡುತ್ತಾ ಬಂದಿರುವುದು ಹೆಮ್ಮೆಯ ವಿಷಯ. ಯಾವುದೇ ಬದಲಾವಣೆಗೆ (ಸಾಹಿತ್ಯಕ, ಸಾಂಸ್ಕೃತಿಕ) ಹೊಸ ವಿಚಾರಗಳು ಹುಟ್ಟಿದಾಗ ಅದನ್ನು ನಿಯತ್ತಿನಿಂದ ಕಾರ್ಯರೂಪಕ್ಕೆ ತರಲು ಬೀದಿಗಿಳಿದ ಚಂಪಾ; ನಮ್ಮ ನಡುವಿನ ಕೆಲವೇ ಪ್ರಾಮಾಣಿಕ ಲೇಖಕರಲ್ಲಿ ಒಬ್ಬರು.

ಬೆಂಗಳೂರಿನಿಂದ ಪ್ರಕಟವಾಗುತ್ತಿರುವ 'ಶೂದ್ರ' 'ಅಂಕಣ' 'ಸಮುದಾಯ

---

* ೭೫-೭೬ರ ತುರ್ತು ಪರಿಸ್ಥಿತಿಯ ಕರಾಳ ದಿನಗಳಲ್ಲಿ ಚಂಪಾ ಸೆರೆಮನೆಯಲ್ಲಿದ್ದಾಗ ಈ ಪತ್ರಿಕೆ ಪ್ರಕಟಣೆ ನಿಂತಿತ್ತು.

'ವಾರ್ತಾಪತ್ರ' 'ಸಾಕ್ಷಿ' ಇತ್ತೀಚಿನ 'ಬಂಡಾಯ ಸಾಹಿತ್ಯ'; ಡಾ॥ ಯು. ಆರ್. ಅನಂತ ಮೂರ್ತಿ ಸಂಪಾದಕತ್ವದಲ್ಲಿ ಮೈಸೂರಿನಿಂದ ಪ್ರಕಟವಾಗುತ್ತಿರುವ 'ರುಜುವಾತು' ಇವಿಷ್ಟೇ ಸದ್ಯಕ್ಕೆ ಬದುಕುಳಿದ ಪತ್ರಿಕೆಗಳು*. ಇವುಗಳಲ್ಲಿ 'ಶೂದ್ರ' ಹತ್ತು ವರ್ಷಗಳನ್ನು ಹೇಗೋ ಪೂರೈಸಿದ್ದರೆ, 'ಅಂಕಣ' ಸ್ವಲ್ಪ ತಡವಾದರೂ ಕೆಲವೇ ಓದುಗರನ್ನು ತಲುಪುತ್ತಿದೆ. 'ಸಾಕ್ಷಿ' ಕನ್ನಡದ ನವ್ಯಾಚಾರಿಯಾದ ಅಡಿಗರ ಕೂಸಾದರೂ ಅದರ ಅಸ್ತಿತ್ವವೇ ತಿಳಿಯುತ್ತಿಲ್ಲ. ಈ ಪತ್ರಿಕೆ ಕನ್ನಡದ ಫೀನಿಕ್ಸ್ (ಹುಟ್ಟು–ಸಾವು–ಹುಟ್ಟುಗಳ ಮಾತಿದು).

ರಾಜ್ಯ ಬಂಡಾಯ ಸಾಹಿತ್ಯ ಸಂಘಟನೆಯಿಂದ ಪ್ರಕಟವಾಗುತ್ತಿರುವ 'ಬಂಡಾಯ ಸಾಹಿತ್ಯ' (ದ್ವೈಮಾಸಿಕ) ಬರಗೂರು ರಾಮಚಂದ್ರಪ್ಪ ಅವರ ಸಂಪಾದಕತ್ವದಲ್ಲಿ ಬರುತ್ತಿದೆ. ಈ ಪತ್ರಿಕೆಗೆ ಆರ್ಥಿಕವಾಗಿ ಯಾವುದೇ ಬುನಾದಿಯೂ ಇಲ್ಲದೆ ಕಾಲಕಾಲಕ್ಕೆ ಪ್ರಕಟವಾಗುತ್ತಿಲ್ಲವೆಂಬುದು ವಾಸ್ತವವಾದರೂ; ರಾಜ್ಯವ್ಯಾಪಿ ಸಂಘಟನೆ ಇರುವ ಬಂಡಾಯ ಸಾಹಿತ್ಯ ಬಳಗದ ಯಾವುದೇ ಲೇಖಕರೂ ಸಂಪಾದಕೀಯ ಮಂಡಳಿಯಲ್ಲಿಲ್ಲದ್ದು ಬಹುಶಃ ಈ ಪತ್ರಿಕೆ ಕ್ಷೀಣವಾಗಲು ಕಾರಣ ಇರಬಹುದು. ಬರಗೂರರಂತಹ ಬಂಡಾಯ ಬರಹಗಾರರು ಮನಸ್ಸು ಮಾಡಿದ್ದರೆ. ಈಗಿರುವ ಸಾಹಿತ್ಯ ಪತ್ರಿಕೆಗಳಿಗಿಂತ 'ಬಂಡಾಯ ಸಾಹಿತ್ಯ' ಪತ್ರಿಕೆಯನ್ನು ಉತ್ತಮ ಪತ್ರಿಕೆಯನ್ನಾಗಿ ಮಾಡಬಹುದಿತ್ತು. ಇದರ ಭವಿಷ್ಯದ ಬಗ್ಗೆ ನಾವು ಸಹ ಕುತೂಹಲಿಗಳಾಗಿದ್ದೇವೆ.

ಇನ್ನು ಈಗಾಗಲೇ ಹಲವು ಆದರ್ಶಗಳನ್ನು ಉದ್ದೇಶಗಳನ್ನು ಇಟ್ಟುಕೊಂಡು ಹುಟ್ಟಿ ಸತ್ತುಹೋದ ಪತ್ರಿಕೆಗಳ ಸೋಲಿನ ಬಗ್ಗೆ ನಾವು ಸ್ವಲ್ಪ ಹೆಚ್ಚೇ ತಿಳಿದುಕೊಂಡಿದ್ದೇವೆ. ಸುಮಾರು ೨೦ ವರ್ಷಗಳ ಹಿಂದೆ ಮೈಸೂರಿನಿಂದ ಶ್ರೀ ಕೃಷ್ಣ ಆಲನಹಳ್ಳಿ ಸಂಪಾದಿಸುತ್ತಿದ್ದ 'ಸಮೀಕ್ಷಕ', ಶ್ರೀರಾಮ ಮತ್ತು ಮಿತ್ರರು ಸಂಪಾದಿಸುತ್ತಿದ್ದ 'ಲಹರಿ', ಚಿತ್ರದುರ್ಗದಿಂದ ಮಂಗ್ಳೂರ ವಿಜಯ ಸಂಪಾಧಿಸುತ್ತಿದ್ದ 'ಬದುಕು' ಮುಗುಟಖಾನ್ ಹುಬ್ಬಳ್ಳಿಯಿಂದ ಪ್ರಕಟಣೆ ಆರಂಭಿಸಿದ 'ಕಾವ್ಯಶ್ರೀ' (ಒಂದೇ ಪ್ರತಿ ನಮ್ಮ ಗಮನಕ್ಕೆ ಬಂದದ್ದು) ಮೈಸೂರಿನಿಂದ ಹಲವು ವರ್ಷ ನಿಯತ್ತಿನಿಂದ ಪ್ರಕಟವಾದ ಕೆಂಪು ಪಟ್ಟಿಯ 'ಒಡನಾಡಿ'– ಇಂಥ ಪತ್ರಿಕೆಗಳು ಏಕೆ ಹೆಚ್ಚುದಿನ ಉಳಿಯಲಿಲ್ಲವೆಂಬ ಬಗ್ಗೆ ನಮಗೆ ಉತ್ತರ ಸಿಕ್ಕಿರುವುದರಿಂದ, ಹಿಂದಿನ ಇಂಥ ಪತ್ರಿಕೆಗಳಿಗೆ ಬಂದ ದುರ್ಗತಿ ನಮಗೂ ಬರಬಾರದೆಂಬ ಎಚ್ಚರಿಕೆಯಿಂದ 'ಅನ್ವೇಷಣೆ'ಯ ಪೋಷಣೆಗೆ ಹಲವು ಯೋಜನೆಗಳನ್ನು ಹಾಕಿಕೊಂಡಿದ್ದೇವೆ. (ಈ ಬಗ್ಗೆ ಮುಂದಿನ ಸಂಚಿಕೆಯಲ್ಲಿ ಪ್ರಸ್ತಾಪಿಸಲಾಗುವುದು)

'ಎಂಥಾ ಕಷ್ಟ ಕಾಲದಲ್ಲೂ ಪತ್ರಿಕೆ ಉಳಿಯಬೇಕು' ಎಂಬ ನಮ್ಮ ಮಿತ್ರರ ಅಭಿಮಾನದ ಮಾತನ್ನು ನಾವು ನಿಮ್ಮೊಂದಿಗೆ ಹಂಚಿಕೊಳ್ಳಬೇಕಾಗುತ್ತದೆ. ಈಗಂತೂ

* ವಿಶ್ವವಿದ್ಯಾನಿಲಯಗಳು ಪ್ರಕಟಿಸುತ್ತಿರುವ ಸಾಹಿತ್ಯ ಪತ್ರಿಕೆಗಳ ಪ್ರಸ್ತಾಪ ಮಾಡಲಾಗಿಲ್ಲ.

(ಕೆಳನೇ ಪುಟ ನೋಡಿ)

# ಮಾಸ್ತಿಯವರ ಐತಿಹಾಸಿಕ ಕಾದಂಬರಿ ಮತ್ತು ಅದರ ಐತಿಹಾಸಿಕತೆ

○ ಮನಜ

ಮಾಸ್ತಿಯವರ ಐತಿಹಾಸಿಕ ಕಾದಂಬರಿ "ಚಿಕವೀರರಾಜೇಂದ್ರ"ದ ಬಗ್ಗೆ ಸದ್ಯ ಯಾವುದೇ ಪೀಠಿಕೆಯೂ ಇಲ್ಲದೆ ಮಾತನಾಡಬಹುದು; ಏಕೆಂದರೆ ಸಾಹಿತ್ಯ ಹಾಗೂ ಪತ್ರಿಕಾರಂಗದ ವಿದ್ವದ್ವಲಯದಲ್ಲಿ ಈಗಾಗಲೇ ಪೀಠಿಕೆ ಸಿದ್ಧವಾಗಿದೆ. ಅಂತೆಯೇ ಈ ಕಾದಂಬರಿಯ ಕಥಾಸಂವಿಧಾನ, ಪಾತ್ರಕಲ್ಪನೆ, ಬೆಳವಣಿಗೆ ಹಾಗೂ ಸಂಪೂರ್ಣ ಕಾದಂಬರಿ ಕೊನೆಯಲ್ಲಿ ತಾಳಿ ನಿಲ್ಲುವ ತಾತ್ವಿಕ ಧೋರಣೆ ಮತ್ತು ಅದರ ಕಲಾತ್ಮಕ ಯಶಸ್ಸನ್ನು ಕುರಿತ ಸ್ಥೂಲ ವಿಶ್ಲೇಷಣೆ ಪ್ರಸ್ತುತವಾದರೂ, ಈ ಐತಿಹಾಸಿಕ ಕಾದಂಬರಿಯ ಸಂಪೂರ್ಣ ವಸ್ತುವನ್ನು ವಾಸ್ತವ ಇತಿಹಾಸದ ಹಿನ್ನೆಲೆಯಲ್ಲಿ ನೋಡುವುದು ಕೂಡ ಈ ಲೇಖನದ ಉದ್ದೇಶವಾಗಿದೆ. ಅಲ್ಲದೆ, ಈ ಐತಿಹಾಸಿಕ ಕಾದಂಬರಿಯ ಸೋಲು–ಗೆಲುವುಗಳನ್ನು ವಿವೇಚಿಸುವ ಈ ವಿಶ್ಲೇಷಣೆಯಲ್ಲಿ ಅದರ ಮಿತಿಗಳನ್ನಷ್ಟೇ ಗುರುತಿಸುತ್ತಾ ಹೋಗಿದ್ದರೂ ಕೃತಿ ಸಂದರ್ಭದಲ್ಲಿ ಮೆಚ್ಚಲೇಬೇಕಾದ ಅಂಶಗಳು ತಂತಾನೇ ಮೆಚ್ಚಿಸಿಕೊಂಡಿರುತ್ತವೆ.

ಕಾದಂಬರಿಯನ್ನು ಸಂಪೂರ್ಣವಾಗಿಯೂ ಓದಿ ಮುಗಿಸಿ, ಕಥಾ ಸಂವಿಧಾನ ದೊಳಗೆ ಗಮನ ಸೆಳೆಯುವ ಮುಖ್ಯ ಪಾತ್ರಗಳ ಬೆಳವಣಿಗೆ, ಹಾಗೂ ಆ ಪಾತ್ರಗಳ ಬೆಳವಣಿಗೆ ಬಿಟ್ಟುಕೊಡುವ ಧ್ವನಿ ಸಾಧ್ಯತೆಯ ಬಗ್ಗೆ ಯೋಚಿಸಿದಾಗ, ಅಭೇದ್ಯ ಮರ್ಮವೆನಿಸುವ ಧ್ವನಿಯೊಂದು ಕಾದಂಬರಿಯಲ್ಲಿ ಅಡಗಿದ್ದು, ಬಹುಶಃ ಓದುಗನ

ಗ್ರಹಣಕ್ಕೆ ಅಷ್ಟು ಸುಲಭವಾಗಿಯೂ ಆ ಮಾರ್ಮಿಕ ಧ್ವನಿ ನಿಲುಕದೆಂದೇ ತೋರುತ್ತದೆ. ಅದೆಂದರೆ, ಇಡೀ ಕೊಡಗು ಸಾಮ್ರಾಜ್ಯದ ಪತನದ ಮೂಲ: ಕಾದಂಬರಿಯು ಆದಿಯಿಂದ ಅಂತ್ಯದವರೆಗೂ ಚಿತ್ರಿತವಾಗಿರುವಂತೆ ಕೊಡಗು ಸಾಮ್ರಾಜ್ಯದ ಪತನಕ್ಕೆ ದೊರೆ ಚಿಕವೀರರಾಜನ ದಾಷ್ಟ್ರ್ಯ ಮತ್ತು ವಿಷಯಲಂಪಟತನಗಳೇ ಮೂಲ ಕಾರಣಗಳು.....ಆದಾಗಿ, ಆ ದಾಷ್ಟ್ರ್ಯ ಹಾಗೂ ವಿಷಯಲಂಪಟತನದ ಹಿಂಬದಿಯಲ್ಲೇ ಆ ಮಾರ್ಮಿಕ ಧ್ವನಿ ಪರಂಪರೆ ಆರಂಭಗೊಳ್ಳುವುದು. ಅಂದರೆ. ಚಿಕವೀರರಾಜನ ವಿಷಯಲಾಂಪಟ್ಯಕ್ಕೆ ಮೂಲಕಾರಣ, ಮುಖ್ಯವಾಗಿ, ಆಪ್ತಮಂತ್ರಿ ಕುಂಟಬಸವನ ಸಹವಾಸ. ಕುಂಟ ಬಸವನ ಹುಟ್ಟಿಗೆ ಮೂಲ ಹಿಂದಿನ ದೊರೆ ಲಿಂಗರಾಜನ ಅನೈತಿಕ ಸಂಬಂಧ. ಲಿಂಗರಾಜನ ಆ ಅನೈತಿಕಸಂಬಂಧದ ಮೂಲ, ದೀಕ್ಷಿತನ ಸೋದರನ ಮಗಳಾದ ಪಾಪ, ಅಥವಾ ಪ್ರಸ್ತುತ ಚಿಕವೀರಾಜನ ತಲೆಮಾರಿನ ಭಗವತಿ ಅಥವಾ ಬ್ರಾಹ್ಮಣ ಹೆಣ್ಣು. ಅರ್ಥಾಥ್, ಶೂದ್ರ ಅಥವಾ ಅಬ್ರಾಹ್ಮಣನೊಬ್ಬ ಬ್ರಾಹ್ಮಣ ಹೆಣ್ಣನ್ನು (ಶಾಸ್ತ್ರ ವಿರುದ್ಧವಾದ ಪ್ರತಿಲೋಮ ಕ್ರಮದಲ್ಲಿ) ಕಾಮದ ಶೋಷಣೆಗೆ ಗುರಿಮಾಡಿದುದರಿಂದಾಗಿಯೇ ಇಡೀ ಕೊಡಗು ಸಾಮ್ರಾಜ್ಯ ಪತನವಾಯಿತೆಂಬ ಎಚ್ಚರಿಕೆಯ (caution) ಧ್ವನಿ ಕಾದಂಬರಿಯ ಉದ್ದಕ್ಕೂ ತುಂಬಾ ಮಾರ್ಮಿಕವಾಗಿ ನಡೆದಿರುವುದನ್ನು ಗಮನಿಸಬಹುದು. ಅದೂ ಅಲ್ಲದೆ, ಕೊಡಗು ಸಾಮ್ರಾಜ್ಯದ ಪತನದ ಕೊನೆ ಗಳಿಗೆಯವರೆಗೂ ಭಗವತಿ ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಕಥಾ ಸಂವಿಧಾನದೊಳಗೇ ನಿಲ್ಲುವ ವಾಸ್ತವ್ಯ ಕೂಡ ಮೇಲಿನ ಅಭಿಪ್ರಾಯವನ್ನು ಪೋಷಿಸುತ್ತದೆ. ಅಷ್ಟೇ ಅಲ್ಲದೆ, ಆ ಅಭೇದ್ಯ ಮಾರ್ಮಿಕ ಧ್ವನಿಯನ್ನು ಕಾದಂಬರಿಯೊಳಗೆ ತುಂಬಾ ಎಚ್ಚರದಿಂದಲೂ ಅರ್ಥಪೂರ್ಣವಾಗಿಯೂ ಬೆಳೆಸಲಾಗಿದೆಯೆಂಬ ಅರ್ಥ ಸಾಧ್ಯತೆಯ ಸ್ಥಿರೀಕರಣಕ್ಕೆ ಭಗವತಿಯೊಂದು ಜೀವಂತ ಸಾಕ್ಷಿಯೆನಿಸುತ್ತಾಳೆ. ಆದಾಗ್ಯೂ ಆ ಎಚ್ಚರಿಕೆಯ ಧ್ವನಿ ಬೆಳವಣಿಗೆಯ ಪ್ರಕ್ರಿಯೆಯಲ್ಲಿ ಮೂಲ ವ್ಯಕ್ತಿಯೆನಿಸುವ ಭಗವತಿ, ಜಾತಿಯಲ್ಲಿ ಬ್ರಾಹ್ಮಣಳೆಂಬುದು ಕೇವಲ ಆಕಸ್ಮಿಕವೆನಿಸಿಬಿಡಬಹುದಿತ್ತು. ಆದರೆ, ತನ ಮಗನಿಗೆ ರಾಜ್ಯದ ಪಟ್ಟ ದೊರೆಯಬೇಕೆಂದು ಅವಳು ನಡೆಸುವ ನಿಗೂಢ ಸಂಘರ್ಷ ಆಕಸ್ಮಿಕವೆನಿಸುವುದಿಲ್ಲ. ಬದಲಾಗಿ ಅದು ಉದ್ದೇಶಪೂರಿತವೂ ಪ್ರಜ್ಞಾಪೂರ್ವಕವೂ ಆದುದೆಂಬುದಕ್ಕೆ ಕಥೆಯೊಳಗೇ ಆಧಾರವಿರುವುದನ್ನು ಮನಗಾಣಬಹುದು. • ಅಷ್ಟೇ ಅಲ್ಲದೆ, ರಾಜನ ಕಾಮದ ಶೋಷಣೆಗೆ ಭಗವತಿಯಂತೆಯೇ ಇನ್ನೂ ಎಷ್ಟೋ ಹೆಣ್ಣುಗಳು ತುತ್ತಾಗಿ ಹೋದರೆಂಬುದಕ್ಕೆ ಕಾದಂಬರಿಯೊಳಗೆ ವಿಪುಲವಾದ ಆಧಾರಗಳಿವೆ. ಆದರೆ ಆ ಹೆಣ್ಣುಗಳಾದರೂ ಭಗವತಿಯಂತೆ ರಾಜ್ಯದ ಪಟ್ಟಕ್ಕಾಗಿ ಅಥವ ಅದರ ನಾಶಕ್ಕಾಗಿ ಸೇಡಿನ ಸ್ಥಿರಚಿತ್ತಳಾಗಿ ನಿಂತು. ನಿಗೂಢ ಸಂಘರ್ಷ ನಡೆಸಲಿಲ್ಲವೆಂಬುದು ಕೂಡ ಕಾದಂಬರಿಯ ಸಂವಿಧಾನದೊಳಗೇ ನಿಂತಿರುವ ವಾಸ್ತವ ಸತ್ಯ. ಆದ್ದರಿಂದ ಕಾದಂಬರಿ ತಾಳುವ ಒಟ್ಟು ತಾತ್ವಿಕ ಧೋರಣೆಯಲ್ಲಿನ, ಇಡೀ ಸಾಮ್ರಾಜ್ಯದ ಪತನಕ್ಕೆ ಬ್ರಾಹ್ಮಣ ಹೆಣ್ಣಿನ ಶೋಷಣೆಯೇ ಮೂಲಕಾರಣವೆಂಬ ಮಾರ್ಮಿಕ ಧ್ವನಿ ಸಾಧ್ಯ

ತೆಯನ್ನು ಈ ಕೃತಿ ಸಂದರ್ಭದಲ್ಲಿ ಅಲ್ಲಗಳೆಯಲು ಸಾಧ್ಯವಿರುವಂತಿಲ್ಲ[1]. ಹಾಗೆಯೇ ಇನ್ನೊಂದು ಅಂಶವನ್ನಿಲ್ಲಿ ನೆನಪಿಸುವುದಾದರೆ, ಬ್ರಾಹ್ಮಣ ಹೆಣ್ಣನ್ನು ಲಿಂಗರಾಜ ದೊರೆ ಕಾಮದ ಶೋಷಣೆಗೆ ಗುರಿಮಾಡಿ ಅವಳ ಮಗುವಿನ ಕಾಲನ್ನೇ ತಿರುಚಿದನೆಂಬುದರ ಅರ್ಥ: ಆ ಪ್ರತಿಲೋಮ ಪಾಪಕೃತ್ಯದ ಫಲವೆಂಬಂತೆ ಮಗನಾದ ಚಿಕವೀರರಾಜೇಂದ್ರ ದೊರೆಯ ಕಾಲಕ್ಕೆ ಇಡೀ ಕೊಡಗು ಸಾಮ್ರಾಜ್ಯದ ಕಾಲೇ ಕುಂಟಾಯಿತೆಂಬ ಅಥವಾ ರಾಜ ಸದಾ ಕಾಮೋದ್ರೇಕದಿಂದ ಮತಿವಿಕಲ್ಪನಾದನೆಂಬ ತುಂಬಾ ಅರ್ಥಪೂರ್ಣವಾದ ಪುನರರ್ಥ ಧ್ವನಿ (recurrent tone) ಸಾಧ್ಯತೆ ಕೂಡ ಕುಂಟ ಬಸವನ ಪಾತ್ರದಿಂದ ಸಾಧ್ಯವೆನಿಸುವುದಿಲ್ಲವೆ?

ಆಂಗ್ಲ ಅಧಿಕಾರಿಗಳು ರಾಜ್ಯಕ್ಕೆ ಭೇಟಿಕೊಟ್ಟು ರಾಜ ಅತಿಥಿಗಳಾದಾಗ ಅವರಿಗೇರ್ಪಡಿಸುವ ಔತಣ ಕೂಟವನ್ನು ಕೇವಲ ಸ್ವೇಚ್ಛಾಚಾರವೆಂದೂ, ಅದರಿಂದ ರಾಜ್ಯದ ಬೊಕ್ಕಸ ಬರಿದಾಯಿತೆಂದೂ ವರ್ಣಿಸುವ(ಪು. ೬೪–೫)ಲೇಖಕರ ಚಿತ್ರ ಒಬ್ಬ ಸಾಮಾನ್ಯ ಸಂಸಾರಿಯು ಸಂಪಾದನೆಯಿಲ್ಲದೆ ಮಾಡಬಹುದಾದ ದುಂದುವೆಚ್ಚದ ಒಂದು ಸಣ್ಣ ಅನುಭವವನ್ನು ಕೊಡುತ್ತದೆಯೇ ಹೊರತು, ಈ ಸಂದರ್ಭವನ್ನು ಸರಿಸಾಟಿಯಾಗಿ ಪ್ರತಿಬಿಂಬಿಸುವ, ರಾಜ್ಯದ ಅರ್ಥವ್ಯವಸ್ಥೆಯನ್ನಾಗಲಿ, ಸಂಪನ್ಮೂಲಗಳ ದಾರಿದ್ರ್ಯದ ಸ್ಥಿತಿಯನ್ನಾಗಲಿ ಅಥವಾ ಇಡೀ ರಾಜ್ಯದ ಪ್ರಜಾಸಮುದಾಯದ ಜೀವನ ಮಟ್ಟದ ಆರ್ಥಿಕ ರೇಖೆಗಳು ಉಂಟುಮಾಡಬಹುದಾದ ಒಂದು ಐತಿಹಾಸಿಕ ಅನುಭವವನ್ನಾಗಲಿ ಕೊಡುವುದಿಲ್ಲ. ಅಲ್ಲದೆ, ಚಿಕ್ಕಣ್ಣಶೆಟ್ಟಿಗೆ ಸಲ್ಲಬೇಕಾದ ಬಾಕಿ ಲಕ್ಷಕ್ಕೆ ಮೀರಿದೆಯೆಂದಾಗ ರಾಣಿ ಆಡುವ ಮಾತು ಇಲ್ಲಿ ಗಮನಾರ್ಹ. "ಲಕ್ಷಕ್ಕೆ ಮೇಲೆ ಸಾಲ ನಿಲ್ಲುವಂತೆ ನೀವು ಸಾಮಾನು ಕೊಟ್ಟಿದ್ದೀರಲ್ಲ ಶೆಟ್ಟರೆ. ಎಂಟು, ಹತ್ತು, ಹದಿನೈದು ಸಾವಿರ ಆದಾಗ ಯಾಕೆ ಅರಸರಿಗೆ ಈ ಸಂಗತಿ ತಿಳಿಸಲಿಲ್ಲ? ಸಾಲಾನ ಇಷ್ಟು ಭೂತವಾಗಿ

---

1 ಪ್ರೊ. ಕೀರ್ತಿನಾಥ ಕುರ್ತಕೋಟಿಯವರು ಭಗವತಿಯ ಪಾತ್ರದಲ್ಲಿ, ಓದುಗನ ಹೊರ ನೋಟಕ್ಕೆ ಗೋಚರವಾಗುವ (ಶ್ರೀನಿವಾಸ, ಪು. ೧೫೦ ಸಂ: ಮಾವಿನಕೆರೆ ರಂಗನಾಥನ್) ತನ್ನ ಮಗನಿಗೆ ರಾಜ್ಯದ ಪಟ್ಟ ಕೊಡಿಸಬೇಕೆಂದು ರಾಜಮನೆತನದ ಮೇಲೆ "ಪ್ರತೀಕಾರದ ಹಟ" ಸಾಧಿಸುತ್ತಾಳೆಂದು ಮಾತ್ರ ಅಭಿಪ್ರಾಯಿಸುತ್ತಾರೆ. ಅಂದರೆ, ಆ ಪಾತ್ರದ ಬಗ್ಗೆ ಇದು ಕೇವಲ ಸಾಮಾನ್ಯ ಹೇಳಿಕೆಯೆನಿಸುತ್ತದೆಯೇ ಹೊರತು ಅವಳ ನಿಗೂಢ ಸಂಘರ್ಷದ ಅಂತಃಕರಣದಲ್ಲಿ ಅಡಗಿರುವ ಮಾರ್ಮಿಕ ಧ್ವನಿ ಪರಂಪರೆಯತ್ತ ಗಮನ ಸೆಳೆದಂತಾಗುವುದಿಲ್ಲ. ಪ್ರೊ. ಎಲ್. ಎಸ್. ಶೇಷಗಿರಿರಾವ್ ಕೂಡ ಭಗವತಿ ಒಂದು "ಕಾಲ್ಪನಿಕ ಪಾತ್ರ" ವೆಂದು (ಅದೇ ಪು. ೧೬೫) ಸುಮ್ಮನಾಗಿ ಬಿಡುವುದರಿಂದ ಮಾಸ್ತಿಯವರ ಪ್ರತಿಭೆಯಿಂದ ಜನಿತವಾದ ಈ ಮಾರ್ಮಿಕ ಧ್ವನಿ ಪರಂಪರೆ ಸೃಷ್ಟಿಸುವ ಕಾಲವಂತಿಕೆಯನ್ನು ಕಡೆಗಣಿಸಿದಂತಾಗಿಬಿಡುತ್ತದೆ. ತತ್ಪರಿಣಾಮವಾಗಿ ಕೃತಿಯ ಕಾಲದರ್ಶನದ ಸಂದರ್ಭದಲ್ಲಿ ಆ ಪಾತ್ರದ ವಿಶ್ಲೇಷಣೆಯಿಂದ ಹೊರಡುವ ತಾತ್ವಿಕ ಧೋರಣೆಯ ನಿಜರೂಪವನ್ನು ಮರೆಗೊಳಿಸಿದಂತೆನಿಸಿ, ಕೃತಿಯ ಯಶಸ್ಸು ಅಥವಾ ಸೋಲಿಗೆ ಸಲ್ಲಬಹುದಾಗಿದ್ದ ಕೊಡುಗೆ ಇಲ್ಲವಾಗುವುದು ಸೂಕ್ತವೆನಿಸುವಂತಿಲ್ಲ.

ಬೆಳೆಸಿಬಿಟ್ಟು ಅರಮನೇನ ದಾರಿ ತಪ್ಪಿಸಿದ್ದೀರಲ್ಲ" (ಪು. ೮೮) ಎಂದು ಪ್ರಶ್ನಿಸಿದಾಗ ಶೆಟ್ಟಿ ಹಾರಿಕೆ ಉತ್ತರ ಕೊಡುತ್ತಾನೆ. ಇಲ್ಲಿ ಮೊದಲನೆಯದಾಗಿ ರಾಣಿಯ ಸಂದರ್ಭಾವಧಾರಣೆ ತಂತಾನೇ ಗಮನಾರ್ಹವೆನಿಸುತ್ತದೆ. ಎರಡನೆಯದಾಗಿ, ಚಿಕ್ಕಣ್ಣಶೆಟ್ಟಿಯು ಈ ಹಾರಿಕೆ ಉತ್ತರದಿಂದ ಹೊಳೆಯುವುದೇನೆಂದರೆ, ರಾಜ ಅತಿಥಿಗಳ ಔತಣ ಕೂಟದ ವೆಚ್ಚ ದುಂದುವೆಚ್ಚವೆನಿಸಿ, ಅದು ರಾಜತಾಂತ್ರಿಕ ವಿಷಯಕ್ಕಿಂತ ಮಹತ್ವದ್ದೆನಿಸುವಂತಾಗಿ, ಕಥೆಯ ಮುನ್ನಡೆಗೆ ಲೇಖಕರು ದಾರಿ ಸುಗಮ ಮಾಡಿಕೊಳ್ಳುತ್ತಿರುವಂತೆನಿಸುತ್ತದೆ. ಇದರಿಂದಾಗಿ ರಾಜನ ಬಗ್ಗೆ ಇಡೀ ಕಾದಂಬರಿ ತಾಳುವ ಧೋರಣೆಯನ್ನು ಪರಿಶೀಲಿಸಿದಾಗ, ಲೇಖಕರು ರಾಜನ ಬದುಕಿನ ಕೇವಲ ಕರಾಳ ಮುಖವನ್ನಷ್ಟೇ ಚಿತ್ರಿಸುವ ಪೂರ್ವಸಿದ್ಧ ಮನಸ್ಸಿನಿಂದ ಹೊರಟಿರುವರೆನಿಸುವಂತಾಗಿದೆ. ತದನಂತರ, ಚಿಕ್ಕಣ್ಣ ಶೆಟ್ಟಿಯ ಸಾಲ ತೀರಿಸಿ, ರಾಜ್ಯದ ಆಡಳಿತವನ್ನು ಸರಿದಾರಿಗೆ ತರಬೇಕೆಂಬ ಬಗೆಗೆ ರಾಣಿ, ಮಂತ್ರಿಗಳಾದ ಬೋಪಣ್ಣ ಮತ್ತು ಲಕ್ಷ್ಮೀನಾರಾಯಣಯ್ಯರ ನಡುವೆ ನಡೆಯುತ್ತಿದ್ದ ಮಾತುಕತೆಯನ್ನು ಕದ್ದು ಕೇಳಿದ ಬಸವ ಮಂತ್ರಿ ಮತ್ತು ಇದರಿಂದ ಕ್ರೋಧಗೊಂಡ ದೊರೆ, ಇದು ರಾಣಿಯ ಪಿತೂರಿಯೆಂದು ಬಗೆದು, ಅವರೆಲ್ಲರೆದುರಿಗೆ ರಾಣಿಯನ್ನು ಹೀನಾಯವಾಗಿ ಬೈಯುತ್ತಾನೆ. ಸ್ವಾಭಾವಿಕವಾಗೇ ಬೋಪಣ್ಣನ ಕೋಪ ಉಕ್ಕೇರಿ ಬರುತ್ತದೆ; ಆಗ ಲಕ್ಷ್ಮೀನಾರಾಯಣಯ್ಯ ಆಡುವ ಮಾತು "ಸುಮ್ಮನಿರಿ ಬಾಯಿ ತೆರೆಯಬೇಡಿ" (ಪುಟ ೯೪) ಎನ್ನುತ್ತಾನೆ. ಅಂದರೆ, ಈ ಮಾತಿನ ಸಾಂದರ್ಭಿಕ ಧ್ವನಿ ಪರಂಪರೆಯನ್ನು ಪರಿಶೀಲಿಸಬೇಕು. (೧) ರಾಜನ ವಿರುದ್ಧದ ಬಂಡುಕೋರರ ನಿಜವಾದ ಬೌದ್ಧಿಕ ನೇತಾರ ಲಕ್ಷ್ಮೀನಾರಾಯಣಯ್ಯನೇ ಆಗಿದ್ದರೂ, ಅವನ ಆ ಮಾತಿನಿಂದ ಅದು ಅಷ್ಟೊಂದು ತೀವ್ರವಾಗಿ ಆ ಸಂದರ್ಭದಲ್ಲಿ ಅರಸನಿಗೆ ತಟ್ಟಲಾಗಲಿಲ್ಲ. (೨) ರಾಜ ಈ ಸಂದರ್ಭದಲ್ಲಿ ತುಂಬಾ ಕೀಳಾಗಿ ಅಂದದ್ದು ಬೋಪಣ್ಣನನ್ನೇ ಹೊರತು ಲಕ್ಷ್ಮೀನಾರಾಯಣಯ್ಯನನ್ನಲ್ಲ. ಅಲ್ಲದೆ, ಬೋಪಣ್ಣ ಮತ್ತು ರಾಣಿಯರ ಕೌಟುಂಬಿಕ ಸಂಬಂಧ ಬೇರೆ ಈ ಪ್ರಸಂಗಕ್ಕೆ ಪಿತೂರಿಯ ಅರ್ಥದ ಜೀವ ತುಂಬಿತು. (೩) ತತ್ಪರಿಣಾಮವಾಗಿ, ತನ್ನನ್ನೂ ರಾಣಿಯನ್ನೂ ಇಷ್ಟೊಂದು ಕೀಳಾಗಿಡಿದ ದೊರೆಯತ್ತ ದುಡುಕಿ ಪ್ರತಿಭಟಿಸಲುಧ್ಯುಕ್ತನಾಗಿದ್ದವನು ಬೋಪಣ್ಣ ಹೊರತು ಲಕ್ಷ್ಮೀನಾರಾಯಣಯ್ಯನಲ್ಲ. (೪) ಅರ್ಥಾಥ್ ದುಡುಕಿದವನು ಬೋಪಣ್ಣ. ಅಂದರೆ, ಶೂದ್ರ. ಅದೇ ಸಂಯಮ ತಾಳಿದನು ಲಕ್ಷ್ಮೀನಾರಾಯಣಯ್ಯ, ಅಂದರೆ, ಬ್ರಾಹ್ಮಣ. ಹಾಗೆಯೇ ಇದೇ ಸಂದರ್ಭದ ಕೊನೆಯಲ್ಲಿ ಬಸವ ಮಂತ್ರಿಯನ್ನ ಕರೆದ ಲಕ್ಷ್ಮೀನಾರಾಯಣಯ್ಯ "ಬಸವಯ್ಯ, ಅಮ್ಮಾಜಿ ನಮ್ಮನ್ನು ಕೇಳಿ ಬಂದರೆ, ಈಗ ಅರಸರನ್ನು ನೋಡಿಕೊಳ್ಳುವುದಾಗಲಿ ನಾಳೆ ಮತ್ತೆ ಬರುತ್ತಾರಂತೆ ಎಂತ ಅರಿಕೆ ಮಾಡು" ಎಂದು ಆಜ್ಞೆ ಮಾಡುತ್ತಾನೆ. ಅದಕ್ಕೆ ಬಸವ ಮಂತ್ರಿ "ಆಯಿತು ಅಯ್ಯನವರೆ" ಎಂದು ಉತ್ತರಿಸುತ್ತಾನೆ. ಅಂದರೆ ಬಸವ ತನಗೆ ಸಮನಾದ (ತಾನೊಪ್ಪಲಿ, ಬಿಡಲಿ) ಮಂತ್ರಿಯೆಂಬುದು ಸತ್ಯವಾದರೂ ಲಕ್ಷ್ಮೀನಾರಾಯಣಯ್ಯನ ಆ ಆಜ್ಞೆಯನ್ನು ಬಸವ ಸೇವಕ

ನಂತೆ ಪಾಲಿಸಿದನೆಂದೇ ಓದುಗ ಭಾವಿಸುವಂತೆ ಲೇಖಕರು ಮಾಡುತ್ತಿದ್ದಾರೆಂಬುದನ್ನು ಇಲ್ಲಿ ನೆನಪಿಡಬೇಕು. ಇಲ್ಲಿ ಕೂಡ ಆಜ್ಞೆ ಮಾಡಿದವನು ಮಂತ್ರಿ ಲಕ್ಷ್ಮೀನಾರಾಯಣಯ್ಯ; ಅಂದರೆ ಬ್ರಾಹ್ಮಣ. ಅದನ್ನು ಸೇವಕನಂತೆ ಪಾಲಿಸಿದವನು ಬಸವ ; ಅಂದರೆ ಶೂದ್ರ ಅಥವಾ ಲಿಂಗರಾಜನ ಅನೈತಿಕ ಸಂಬಂಧದಿಂದ ಹುಟ್ಟಿರುವ ಅನೈತಿಕ ಲಿಂಗಾಯತ. ಹೀಗೆ ಇದೇ ಸಂದರ್ಭದಲ್ಲಿ ನೆನಪಿಡಬೇಕಾದ ಇನ್ನೊಂದು ಮುಖ್ಯಾಂಶವೆಂದರೆ, ಈ ಮೊದಲೇ ಹೇಳಿರುವಂತೆ ರಾಜನ ಪಾತ್ರವನ್ನು ಅವನ ಬದುಕಿನ ಕರಾಳ ಮುಖ ಹಾಗೂ ನೈತಿಕ ಪತನದ ಹಾದಿಯಲ್ಲಿ ಸಾಗಿಸುವ, ಕಥಾನಕ ರಂಜನೆಯ ಓಘದಂಥ ದುರ್ಬಲ ತಂತ್ರದಲ್ಲೂ, ಪಾತ್ರಗಳ ಹಿನ್ನೆಲೆಯಲ್ಲಿ ತುಂಬಾ ಸ್ಪಷ್ಟವಾಗಿರುವ ಈ ಜಾತೀಯ ವೈಭಿನ್ನತೆ ಓದುಗನ ಗ್ರಹಣದಿಂದ ಸುಲಭವಾಗಿ ಜಾರಿಕೊಳ್ಳುವಂತೆ ಮಾಡಿರುವ ಲೇಖಕರ ಜಾಣ್ಮೆ ಇಲ್ಲಿ ಮೆಚ್ಚಬೇಕಾದ್ದು.

ಇಡೀ ಕಾದಂಬರಿಯಿಂದ ಸೃಷ್ಟಿಯಾಗಬಹುದಾಗಿದ್ದ ಅತ್ಯಂತ ಮುಖ್ಯವಾದ ಧ್ವನಿ ಶ್ರೀಮಂತಿಕೆಯೆಂದರೆ ರಾಜ ಮತ್ತು ರಾಣಿಯರ ನಡುವಿನ ಅಗಾಧವಾದ ಅಂತರ ಅಥವಾ ಸ್ವಭಾವದಲ್ಲಿನ ನೇರ ವೈರುದ್ಧ್ಯ (Direct contrast). ಅಂದರೆ, ಈ ಕಡೆ, ಗಂಡನೇನೋ ಅತ್ಯಂತ ಕೆಟ್ಟವನು. ಅವನ ಪಾತ್ರವನ್ನು ಕಣ್ಣಿಗೆ ಕಾಪುಕಟ್ಟಿ ಕೊಂಡ ಕುದುರೆಯಂತೆ ಒಂದೇ ದಿಕ್ಕಿನಲ್ಲಿ ನಡೆಸಿಕೊಂಡು ಹೋಗುತ್ತಾರೆ. ಅಂತೆಯೇ ಈ ಪಾತ್ರ ಬೆಳವಣಿಗೆಯ ಏಕತಾನತೆ (monotonous) ಯಿಂದಾಗಿ ಆ ಕೆಟ್ಟವ ನಲ್ಲೂ ಅಲ್ಲಲ್ಲಿ ಕಾಣಿಸಿಕೊಳ್ಳುವ ಒಳ್ಳೆಯ ಗುಣಗಳು ನಿರಪರಾಧಿಗಳಂತೆ ನಾಶವಾಗಿ ಬಿಡುತ್ತವೆ. ಉದಾಹರಣೆಗೆ, ನಿಂತುಹೋಗಿದ್ದ ಉತ್ತಯ್ಯ ತಕ್ಕನ ಪಡಿಯನ್ನು ಮುಂದುವರಿಸಿದ್ದು. ಕಾವಲುಗಾರ ತಕ್ಕನನ್ನು ಕ್ಷಮಿಸಿದ್ದು, ಮಗಳ ಮದುವೆ ವಿಷಯ ದಲ್ಲಿ ರಾಜಿ ಮಾಡಿಕೊಳ್ಳುವ ಆತ್ಮಪರಿವೀಕ್ಷಣೆ ಮುಂತಾದ ಶುದ್ಧ ಮಾನವೀಯ ಸನ್ನಿ ವೇಶಗಳು. ಹಾಗೆಯೇ ಆ ಕಡೆ ರಾಣಿಯ ಪಾತ್ರ ಕೂಡ ಅತಿ ಆದರ್ಶ ಮಹಿಳೆ ಎನಿಸು ವಂತೆ ಮಾತ್ರ ನಡೆಸುವ ಆ ಪಾತ್ರ ಬೆಳವಣಿಗೆಯ ಏಕತಾನತೆಯಿಂದಾಗಿ ಅದೊಂದು ಹೆಣ್ತನದ ಸಂವೇದನೆಗೆ ಸನಿಹವೆನಿಸುವ ಬದಲು ಅತಿ ಆದರ್ಶದ ಅಥವಾ ಸನಾತನ ನಂಬಿಕೆಯ ಕೀಲಿನ ಗೊಂಬೆಯೆನಿಸಿ, ರಾಜನ ದಾಷ್ಟ್ಯ್ರಗಳನ್ನೆಲ್ಲಾ ಹೆಣ್ಣಾಗಿ ನಡೆಸಿ ಕೊಳ್ಳುವ ಬದಲು, ದಿವ್ಯಮೌನಿಯಾಗಿ ಸ್ವೀಕರಿಸುತ್ತಾಳೆ. ಉದಾಹರಣೆಗೆ : ದೇವ ಮ್ಮಾಜಿಯನ್ನು ಗಂಡನ ಮನೆಗೆ ಕಳಿಸುವ ಅತ್ಯಂತ ಕ್ಲಿಷ್ಟವಾದ ಬಿಕ್ಕಟ್ಟಿನ ಸಂದರ್ಭ ದಲ್ಲಿ ರಾಜನ ಅನಾಗರೀಕ ದಾಷ್ಟ್ಯ್ರವನ್ನು ಅವಳು ನಡೆಸಿಕೊಂಡ ರೀತಿ; ಬೋಪಣ್ಣ ಲಕ್ಷ್ಮೀನಾರಾಯಣಯ್ಯರ ಮಾತುಕತೆಯನ್ನು ರಾಣಿಯ ಪಿತೂರಿಯೆಂದು ಬಗೆದ ದೊರೆಯ ಅನಾಗರೀಕ ಮಾತುಗಳನ್ನು ಕೇಳಿದ ಸಂದರ್ಭದಲ್ಲಿ ಅವಳು ನಡೆದುಕೊಂಡ ರೀತಿ, ರಾಜಕುಮಾರಿಯ ಮದುವೆ ಮತ್ತು ಕಾವಲುಗಾರ ತಕ್ಕನ ವಿಚಾರಣೆ ಸಂದರ್ಭ ದಲ್ಲಿ ಅವಳು ನಡೆದುಕೊಂಡ ರೀತಿಗಳು ಅವಳನ್ನೊಬ್ಬ ಆದರ್ಶ ಮಹಿಳೆ ಎನಿಸುವ ಬದಲು ಅವಾಸ್ತವ ಪಾತ್ರ ಎನಿಸಿಬಿಡುತ್ತದೆ. ಇಲ್ಲಿ ಆರಂಭದಿಂದಲೂ ಲಿಂಗಾಯಿತ ಅರಸ

ರಿಂದಲೇ ಆಳಲ್ಪಟ್ಟ ಕೊಡಗು ಸಾಮ್ರಾಜ್ಯದ ಲಿಂಗಾಯಿತ ಅರಸರ ಮನೆಗೆ, ಸೊಸೆಯಾಗಿ ಬಂದ ರಾಣಿ ಗೌರಮ್ಮಾಜಿ, ಹುಟ್ಟಿನಿಂದ ಲಿಂಗಾಯಿತಳಲ್ಲ; ಲಿಂಗದೀಕ್ಷೆಯ ಸಂಸ್ಕಾರ ದಿಂದ ಅವಳು ಲಿಂಗಾಯಿತಳಾದ ಕೊಡವರವಳೆಂಬುದನ್ನು ನೆನಪಿಡಬೇಕು. ಇದರಿಂದಾಗಿ ಅವಳ ಪಾತ್ರದಿಂದ ಹೊರಡಬೇಕಾಗಿದ್ದ ನಿಜ ಮೌಲ್ಯಗಳೇನೆಂಬ ವಿಷಯದಲ್ಲಿ ಲೇಖಕ ರಿಗೆ ಒಂದು ಸ್ಪಷ್ಟವಾದ ತಾತ್ವಿಕ ಕಲ್ಪನೆಯಿದ್ದಂತಿಲ್ಲ. ಅಂತೆಯೇ ಈ ಅಸ್ಪಷ್ಟತೆ ಹಾಗೂ ಗೊಂದಲಗಳ ನಡುವೆ ಸುಲಭವಾದ ಆದರ್ಶ ಹೆಣ್ಣಿನ ಹೆಸರಿನಲ್ಲಿ ಆ ಪಾತ್ರ ವನ್ನು ಮುನ್ನಡೆಸಿರುವಂತೆ ತೋರುತ್ತದೆ. ಅಲ್ಲದೆ ರಾಜ ದುಷ್ಟನೆಂಬುದು ಕೂಡ ಲೇಖಕರ ಆ ಆದರ್ಶ ಹೆಣ್ಣಿನ ಪಾತ್ರ ಬೆಳವಣಿಗೆಯ ಹಾದಿಯನ್ನು ಸುಲಭಗೊಳಿಸಿ ದಂತಾಗಿದೆ. ತತ್ಪರಿಣಾಮವಾಗಿ ಈ ಎರಡು ಪಾತ್ರಗಳ ಹಿನ್ನೆಲೆಯಲ್ಲಿ ಸೃಷ್ಟಿಯಾಗ ಬಹುದಾಗಿದ್ದ ಐತಿಹಾಸಿಕ ಅರ್ಥ ಪರಿವೇಷ ಪೇಲವಗೊಳಿಸುತ್ತದೆ. ಇದರಿಂದಾಗಿ ಕಾದಂಬರಿಯ ಹಿಂದೆ ತುಡಿಯುತ್ತಿರುವ ಲೇಖಕರ ಸಾಂಸ್ಕೃತಿಕ ಮೌಲ್ಯಗಳೂ ತಾತ್ವಿಕ ಧೋರಣೆಯೂ ಅಸ್ಪಷ್ಟವೂ ವಿಚ್ಛಿನ್ನವೂ ಆಗಿಬಿಡುತ್ತವೆ. ರಾಜನ ಪಾತ್ರದ ಬಗ್ಗೆ ಮಾತಾಡುತ್ತ ಪ್ರೊ. ಕುರ್ತಕೋಟಿಯವರು ಕೂಡ, ವೀರರಾಜನ ಕಾಮುಕತೆ ಹಾಗೂ ದುಷ್ಟತನಗಳನ್ನಷ್ಟೇ ಪಟ್ಟಿ ಮಾಡಿ"ಪಾಪದ ಈ ಪ್ರಕ್ರಿಯೆಯನ್ನು ಮಾಸ್ತಿಯ ವರು ಈ ಕಾದಂಬರಿಯಲ್ಲಿ ಅತ್ಯಂತ ನಾಟಕೀಯವಾದ ರೀತಿಯಲ್ಲಿ ಚಿತ್ರಿಸಿದ್ದಾರೆ"[1] ಎನ್ನುತ್ತಾರೆ. ಆದರೆ, ವ್ಯಕ್ತಿಚೇತನದಲ್ಲಿ ನೈಸರ್ಗಿಕ ಕ್ರಿಯೆಯಂತೆ ಉದ್ಭುಕ್ತವಾಗುವ ಪಾಪಕೃತ್ಯಗಳೊಡನೆ, ಅಷ್ಟೇ ಜೀವಂತವಾದ ನೈಸರ್ಗಿಕ ಗುಣದಂತೆ ರಾಜನ ಪಾತ್ರದಲ್ಲಿ ಅಲ್ಲಲ್ಲಿ ಕಾಣಿಸಿಕೊಳ್ಳುವ ಸದ್ಗುಣಗಳನ್ನು ಪರಿಗಣಿಸದೇ ಹೋಗುವುದು ಸೂಕ್ತವೆನಿಸು ವಂತಿಲ್ಲ. ಅಷ್ಟೇ ಮುಖ್ಯವಾಗಿ ಇಲ್ಲಿ ಗಮನಿಸಬಹುದಾದ ಇನ್ನೊಂದು ಅಂಶವೆಂ ದರೆ, ರಾಜನ ಕೇವಲ ಕಾಮುಕ ಪ್ರವೃತ್ತಿಯನ್ನೇ ಕಾದಂಬರಿಯ ಕೇಂದ್ರ ಪ್ರಜ್ಞೆಯ ನ್ನಾಗಿ ಮಾಡಿಕೊಂಡು ಬಹುಶಃ ಯಾವ ಐತಿಹಾಸಿಕ ಕಾದಂಬರಿಯೂ ಯಶಸ್ವಿಯಾ ಗಲು ಸಾಧ್ಯವಿರುವಂತಿಲ್ಲ. ಕಾರಣ, ಏಕಪತ್ನಿತ್ವವೆಂಬುದು ಕೇವಲ ಲೇಖಕರ ಸಂಸ್ಕೃತಿ ಮೂಲವಾದ ವೈಯಕ್ತಿಕ ಮನೋಧರ್ಮವೆನಿಸಬಹುದೇ ಹೊರತು ಇಂಡಿಯಾದ ರಾಜರ ಚರಿತ್ರೆಯಲ್ಲಿ ಅದು ವಾಸ್ತವ ಸಂಗತಿಯೆಂದೆನಿಸಲಾರದು.

೨

ಈಗ, ಸ್ವತಃ ಇತಿಹಾಸದಲ್ಲೇ ಇರುವ ಚಿಕವೀರರಾಜನ ಪಾತ್ರವನ್ನು ಪರಿಶೀಲಿ ಸಬಹುದು :

"The character of Chikviraraja appears to have been intentionally bleckened by the letter historiographers of coorg, like Dr. Moegling, G. Richter and Rice. William Jefferson, an officer of the East India company, who was in coorg for some time at the last Raja, and who knew the conditions in coorg at that

1. *ಶ್ರೀನಿವಾಸ, ಪುಟ ೧೪೯.

time has written in the book "Coorg and its Rajas" published in England in 1855 that "we were particularly gratified at finding that this prince was easy of access to his ryots, listening patiently to their grievances and manifesting towards them the atmost consideration and kindness, this eusured him in return their loyalty and affection as a proof of which whenever we travelled with the Raja into the interior of the country hundreds of natives, men, women, and children with curoisity crowded my companion and me an Englishmen being a rara avis in those parts-recevied the Raja with every demonstration of respect and attachment. It gives me the greatest satisfaction to mention this, being aware that the most sinister reports for interested purposes, were industriously propagated to the Raja's prejudice.

"As further proof of the esteem in which the Raja was held by his subjects, it may be mentioned, on his being deposed he issued a written order addressed to his Diwans, Subedars, and Munshees requiring them to state in writing the manner in which he had Governed the country from the time of his assuming the reins of Government upto his dethronement and whether they satisfied or not with his system of Government. The reply to this was a declaration signed by more than four hundred persons expressive of their entire satisfaction with the manner in which the Raja had conducted his Government and administered Justice among them...." ಚಿಕವೀರರಾಜೇಂದ್ರದ ವಾಸ್ತವ ಇತಿಹಾಸ ದೃಷ್ಟಿಯಲ್ಲಿ ರಾಜನ ಪಾತ್ರದ ಬಗ್ಗೆ ವಿಲಿಯಂ ಜಫರ್‌ಸನ್ ತಾಳುವ ಈ ಧೋರಣೆ ತುಂಬಾ ಸೂಕ್ಷ್ಮವಾದ ಪರಿಶೀಲನಾರ್ಹ ಸಂಗತಿಯೆಂಬುದರಲ್ಲಿ ಅನುಮಾನವಿದ್ದಂತಿಲ್ಲ. (೧) ಮೊದಲನೆಯದಾಗಿ, ಗೆಜೆಟಿಯರ್‌ನಲ್ಲಿರುವ ಈ ಮಾಹಿತಿಯ ಪ್ರಕಾರ ರೈಸ್ ಮುಂತಾದ ಚರಿತ್ರೆಗಾರರು ಚಿಕವೀರರಾಜನ ವ್ಯಕ್ತಿತ್ವವನ್ನು ವಿಕಾರಗೊಳಿಸಿದ್ದಾರೆಂಬುದು ತುಂಬಾ ಸ್ಪಷ್ಟವಾಗಿಯೇ ಇದೆ. (೨) ಎರಡನೇಯ ಅಂಶವೆಂದರೆ, ಮೇಲೆ ಉದ್ಧರಿಸುವ ಮಾಹಿತಿಯನ್ನು ನೀಡುತ್ತಿರುವ ಗೆಜೆಟಿಯರ ಪ್ರಕಟವಾಗಿರುವುದು ೧೯೬೫ರಲ್ಲಿ ; ಅದೇ ಚಿಕವೀರರಾಜೇಂದ್ರ, ಕಾದಂಬರಿ ಪ್ರಕಟವಾಗಿರುವುದು ೧೯೫೬ರಲ್ಲಿ. ಅಂದರೆ ವಿದೇಶಿ ಚರಿತ್ರೆಗಾರರಿಂದ ವಿಕಾರಗೊಳಿಸಲ್ಪಟ್ಟಿದ್ದ ಇಂಡಿಯಾದ ಚರಿತ್ರೆಯನ್ನು ೧೯೪೭ ರ ನಂತರ ಸ್ವತಂತ್ರ ಇಂಡಿಯಾದ ಚರಿತ್ರೆಗಾರರು ಸರಿಪಡಿಸತೊಡಗಿದರೆಂಬುದು ನಿಜವಿರಬಹುದು; ಅಲ್ಲದೆ ಹಾಗೆ ಸರಿಪಡಿಸಲ್ಪಟ್ಟ ಮಾಹಿತಿಯನ್ನೇ ೧೯೬೫ರ ಗೆಜೆಟಿಯರ ನೀಡುತ್ತಿದೆಯೆಂಬುದೂ ಸತ್ಯವಿರಬಹುದು ; ಆದರೆ ೧೮೫೫ ರವು

ಹಿಂದೆಯೇ ಪ್ರಕಟವಾಗಿರುವ ವಿಲಿಯಂ ಜಫರಸನ್‌ನ "Coorg and its Rajas" ಎಂಬ ಕೃತಿಯಲ್ಲಿ ದೊರೆಯುವ ಮಾಹಿತಿಯ ಪ್ರಕಾರ ರಾಜನ ಪಾತ್ರ ಸಂಪೂರ್ಣವಾಗಿಯೂ ಭಿನ್ನವಾಗಿದ್ದು, ವಿದೇಶಿ ಚರಿತ್ರೆಗಾರರು ಭಾರತದ ಚರಿತ್ರೆಯನ್ನೂ ಅದರ ರಾಜರ ವ್ಯಕ್ತಿತ್ವಗಳನ್ನೂ ವಿಕಾರಗೊಳಿಸಿದ್ದಾರೆಂಬುದಕ್ಕೆ ಅಪವಾದವೂ ಅನಿಸಿದ್ದು, ವೀರರಾಜನ ಬಗ್ಗೆ ಅತ್ಯಂತ ಸಮೀಪದ ಆಕರ ಮಾತೃಕೆಯೂ ಎನಿಸುತ್ತದೆ. ಏಕೆಂದರೆ, ಚಿಕವೀರರಾಜ ಬ್ರಿಟಿಷರಿಗೆ ಶರಣಾದುದು ೧೮೩೪ ರಲ್ಲಿ. ಅದೇ ವಿಲಿಯಂ ಜಫರ್‌ಸನ್‌ನ ಪುಸ್ತಕ ಪ್ರಕಟವಾಗಿರುವುದು ೧೮೫೫ರಲ್ಲಿ. ಅಷ್ಟು ಮಾತ್ರವಲ್ಲದೆ ವೀರರಾಜನ ಆಳಿಕೆಯ ಕಾಲದಲ್ಲಿ ಸ್ವತಃ ಕೊಡಗು ಪ್ರಾಂತವನ್ನೆಲ್ಲಾ ಪ್ರವಾಸ ಮಾಡಿ, ಅಲ್ಲಿನ ಸಮಸ್ತ ಜನಜೀವನದ ಸರ್ವವಿದ್ಯಮಾನಗಳನ್ನೂ ಸ್ವತಃ ಜನರ ನಡುವೆ ಇದ್ದು ಅಧ್ಯಯನ ಮಾಡಿದವನು ಜಫರ್‌ಸನ್. ಅಂತೆಯೇ ರಾಜ ಸ್ವೇಚ್ಛಾಚಾರಿಯೇ ಅಥವಾ ಪ್ರಜಾತಂತ್ರಿಯೇ ಎಂಬ ಬಗ್ಗೆ ರೈಸ್‌ನಷ್ಟೇ ಅಧಿಕೃತವೆನ್ನಬಹುದಾಗಿದ್ದು. ವೀರರಾಜನ ಅತ್ಯಂತ ಸಮೀಪದ ನಿಕಟವರ್ತಿಯೂ, ಆ ಪ್ರಾಂತದ ಬ್ರಿಟಿಷ್ ಅಧಿಕಾರಿಯೂ ಆಗಿದ್ದ ಜಫರ್‌ಸನ್‌ನ್ನು ಲೇಖಕರು ಕೈಬಿಟ್ಟಿರುವುದರಿಂದ ವೀರರಾಜನ ಪಾತ್ರಕ್ಕಾಗಲಿ ತತ್ಸಂಬಂಧಿತ ಚರಿತ್ರೆಗಾಗಲಿ ನಿಷ್ಪಕ್ಷಪಾತ ನ್ಯಾಯ ದೊರೆತಂತಾಗುವುದಿಲ್ಲ. ಹಾಗೆಯೇ ಇನ್ನೊಂದು ಗಮನಾರ್ಹ ಸಂಗತಿಯೆಂದರೆ ಬ್ರಿಟಿಷ್‌ರ ಕಾಲದಲ್ಲಿ ರಚಿತವಾದ ಇಂಡಿಯಾದ ಚರಿತ್ರೆಯನ್ನು ೧೯೪೭ರ ನಂತರ ಸ್ವದೇಶಿ ಚರಿತ್ರೆಗಾರರು ಸರಿಪಡಿಸತೊಡಗಿದ್ದರೆಂಬ ವಾಸ್ತವ್ಯ ಲೇಖಕರಿಗೆ ತಿಳಿಯದ್ದಲ್ಲ. ಅಂದ ಮೇಲೆ ವೀರರಾಜನ ಚರಿತ್ರೆಯ ಬಗ್ಗೆ ಪೂರ್ವಗ್ರಹದಿಂದ ಕೂಡಿರುವ "Mysore and Coorg" ನಂಥ ಗ್ರಂಥಗಳನ್ನೇ ಏಕೆ ಆಧರಿಸಹೊರಟರೆಂಬುದು ಅರ್ಥವಾಗುವುದಿಲ್ಲ. ಆದಾಗ್ಯೂ ಒಂದು ವಿಷಯ ಸ್ಪಷ್ಟ : ತನ್ನೊಂದು ಕಲಾಕೃತಿಯ ಸೃಷ್ಟಿಗಾಗಿ ಚರಿತ್ರೆಯಿಂದ ವಸ್ತುವನ್ನಾರಿಸಿಕೊಂಡ ಕಾದಂಬರಿಕಾರ ಆ ಕಲಾಕೃತಿಯ ಕಲಾತ್ಮಕ ಯಶಸ್ಸಿನ ದೃಷ್ಟಿಯಲ್ಲಿ ಚರಿತ್ರೆಗೆ ಬದ್ಧನಾಗಿರಬೇಕೆಂದೇನೂ ಇಲ್ಲ. ಆದೇ ಸಂದರ್ಭದಲ್ಲಿ, ಹಾಗೆ ನಿರ್ಮಿಸಲ್ಪಟ್ಟ ಕಲಾಕೃತಿಯನ್ನು ಚರಿತ್ರೆಯೊಡನಿಟ್ಟು ವಿವೇಚಿಸುವ ಓದುಗ, ಆ ಚರಿತ್ರೆಯನ್ನು ಲೇಖಕರು ಹೀಗೆ ಬಳಸಿಕೊಂಡಿದ್ದಲ್ಲಿ ಕೃತಿಯ ಯಶಸ್ಸು ಮತ್ತಷ್ಟು ಉಜ್ವಲಗೊಳ್ಳಬಹುದಿತ್ತೆಂಬ ಸಾಧ್ಯತೆಯನ್ನೂ ಅಲ್ಲಗಳೆಯ ಬರುವಂತಿಲ್ಲ. ನಿದರ್ಶನಕ್ಕೆ, ಮೊದಲನೆಯದಾಗಿ, ವೀರರಾಜನ ಆಳಿಕೆಯ ಕೊನೆಯ ಒಂದು ವರ್ಷವನ್ನು ಮಾತ್ರ ಕಾದಂಬರಿಯ ವಸ್ತುವನ್ನಾಗಿ ಆರಿಸಿಕೊಳ್ಳುವುದರ ಬದಲು. ಅವನ ಆಳಿಕೆಯ ಹದಿನಾಲ್ಕು ವರ್ಷಗಳನ್ನೂ ವಸ್ತುವನ್ನಾಗಿ ಸ್ವೀಕರಿಸಿದ್ದು. ಎರಡನೆಯದಾಗಿ, ವೀರರಾಜ ಎಷ್ಟರಮಟ್ಟಿಗೆ (ಕಾದಂಬರಿಯ ಪ್ರಕಾರ) ಮುಂಗೋಪಿಯೂ, ಅತಿಕಾಮುಕನೂ. ಒರಟನೂ ಆಗಿದ್ದನೋ ಅಷ್ಟರಮಟ್ಟಿಗೆ (ಜಫರ್‌ಸನ್ ಪ್ರಕಾರ) ರೈತರೂ ಮತ್ತು ಸಾಮಾನ್ಯ ಪ್ರಜೆಗಳ ಆಶೋತ್ತರಗಳನ್ನು ಅರ್ಥಮಾಡಿಕೊಂಡು, ಒಬ್ಬ ಸಮಕಾಲೀನ ಪ್ರಜಾತಂತ್ರ ಆಡಳಿತಗಾರನಂತೆ ಅವರ ಸಂವೇದನೆಗೆ ಸ್ಪಂದಿಸುವ, ಹಾಗೂ ರಾಜ್ಯದ ಬುದ್ಧಿಜೀವಿ

ವರ್ಗವೆನಿಸಿದ ದಿವಾನರು, ಸುಭೇದಾರರು ಮತ್ತು ಮುನ್ಷಿಗಳ ನಿರ್ಭೀತ ಟೀಕೆ ಟಿಪ್ಪಣಿಗಳನ್ನು ಅಂತರಂಗ ಪ್ರಾಮಾಣ್ಯದಿಂದ ಸ್ವೀಕರಿಸುವವನೂ ಆಗಿದ್ದನೆಂಬ–ಈ ಮುಂತಾದ ವಿರೋಧಾಭಾಸಗಳಿಂದ ಕೂಡಿರುವ, ಯಾವುದೇ ಮಾನವ ಸಂವೇದನೆಗೆ ಸನಿಹವೆನಿಸಿ, ನೈಜಮಾನವೀಯ ಮೌಲ್ಯಗಳನ್ನು ಪ್ರತಿಬಿಂಬಿಸುವ ಒಂದು ಅತ್ಯಂತ ಅರ್ಥಪೂರ್ಣವೂ ಸಂಕೀರ್ಣವೂ ಆದ ಪಾತ್ರವನ್ನು ನಿರ್ಮಿಸಬಹುದಿತ್ತು. ಅಥವಾ ಇನ್ನೂ ಒಂದು ಮಾತಿನಲ್ಲಿ ಹೇಳುವುದಾದರೆ, ವಾಸ್ತವ ಚರಿತ್ರೆಯ ಹಿನ್ನೆಲೆಯಲ್ಲಿದ್ದರೂ ರಾಜನ ಪಾತ್ರ ಕಾದಂಬರಿಯಲ್ಲಿ ಸಹಜ ಸಂಕೀರ್ಣವಾಗಿ ಮೂಡಿಬಂದಿದ್ದಲ್ಲಿ, ಮೊದಲನೆಯದಾಗಿ ಆ ಆ ಪಾತ್ರದ ಸರಳೀಕರಣ (over simplifica ion)ದಿಂದ ಲೇಖಕರು ಕಲಾತ್ಮಕ ಯಶಸ್ಸಿನ ದೃಷ್ಟಿಯಲ್ಲಿ ಸಾಧಿಸಿದ್ದೇನೆಂಬ ಮೂಲಭೂತ ಪ್ರಶ್ನೆಗೆ ಅವಕಾಶವಿರುತ್ತಿದ್ದಂತಿಲ್ಲ; ಎರಡನೆಯದಾಗಿ ಆ ಪಾತ್ರ ಸೃಷ್ಟಿಯಲ್ಲಿ ಆ ಸಂಕೀರ್ಣತೆ ಸಾಧ್ಯವಾಗಿದ್ದ ಪಕ್ಷದಲ್ಲಿ ಸೃಜನಶೀಲ ಸಾಹಿತ್ಯದ ಕಲಾತ್ಮಕ ಯಶಸ್ಸು ತಂತಾನೇ ಸಾಧಿತವಾಗಬಹುದಿತ್ತೆಂದು ತೋರುತ್ತದೆ. ಆದರೆ ಕಾದಂಬರಿ ಸೃಷ್ಟಿಯಲ್ಲೆ ಘಟಿಸಿಹೋಗಿರುವ ಈ ಪಾತ್ರದ ಅತಿ ಸರಳೀಕರಣ ಒಂದು ಅತಿರೇಕವೆನಿಸಿದರೆ, ವಾಸ್ತವ ಚರಿತ್ರೆಯಲ್ಲೇ ಇರುವ ರಾಜನ ಪಾತ್ರದ ಸಂಕೀರ್ಣ(complexity)ತೆ ಕಡೆಗಣಿತವಾಗಿರುವುದು ಇನ್ನೊಂದು ಅತಿರೇಕವೆನಿಸುವಂತಾಗಿದೆ. ತತ್ಪರಿಣಾಮವಾಗಿ ಈ ಎರಡು ಅತಿರೇಕಗಳ ವೈಪರೀತ್ಯ ಈ ಐತಿಹಾಸಿಕ ಕಾದಂಬರಿಯ ಸೋಲಿಗಿರುವ ಕೆಲವು ಬಹು ಮುಖ್ಯವಾದ ಕಾರಣಗಳಲ್ಲೊಂದೆನಿಸುವಂತೆ ತೋರುತ್ತದೆ. ಆದ್ದರಿಂದ ಕಾದಂಬರಿಕಾರರು ಚರಿತ್ರೆಯ ವಸ್ತುವಿಗಾಗಿ ಇತ್ತೀಚಿನ ಲೇಖಕರಾದ ಐ.ಎಂ. ಮುತ್ತಣ್ಣರಂಥವರನ್ನು ಆಧರಿಸಿರುವುದರಿಂದ ಕಾದಂಬರಿಗಾಗಿರುವ ಲಾಭವೇನೆಂಬುದಕ್ಕಿಂತ, ಸ್ವತಃ ಚಿಕವೀರರಾಜನೊಡನೇ ಬದುಕಿದ್ದ ಜಫರ್‌ಸನ್‌ನನ್ನು ಕೈಬಿಟ್ಟಿರುವುದರಿಂದ ಚಾರಿತ್ರಿಕವಾಗಿಯೇ ಸಂಕೀರ್ಣ ವ್ಯಕ್ತಿಯೆನಿಸುವ ರಾಜನ ಪಾತ್ರಕ್ಕೂ ಕಾದಂಬರಿಯ ಕಲಾತ್ಮಕ ಯಶಸ್ಸಿಗೂ ಆಗಿರುವ ನಷ್ಟವೇನೆಂಬುದೇ ಬಹು ಮುಖ್ಯವಾದ ಪ್ರಶ್ನೆಯೆನಿಸುತ್ತದೆ[1].

ದೇವಮ್ಮಾಜಿಯ ಮಗುವಿನ ಪ್ರಕರಣ, ಕೊಡಗಿನ ರಾಜಕೀಯ ವಿಷಮತೆ ಅತ್ಯಂತ ಉಲ್ಬಣಾವಸ್ಥೆಗೆ ತಿರುಗುವುದರಿಂದ ಕಾದಂಬರಿಗೊಂದು ಗಂಭೀರವಾದ ತಿರುವು

---

1 ಇಷ್ಟನ್ನೆಲ್ಲಾ ಹೇಳುವಾಗ ೧೯೫೫ರಲ್ಲಿ ಮೊಟ್ಟಮೊದಲಿಗೆ ಪ್ರಕಟವಾಗಿರುವ ಜಫರ್‌ಸನ್‌ನ ಪುಸ್ತಕ ಪ್ರಸ್ತುತ ಅಥವಾ ೧೯೬೫ರ ಗೆಜೆಟಿಯರಿಗೆ ಉಪಲಬ್ಧವಿದ್ದುದು ಮಾತ್ರವಲ್ಲದೆ, ಲೇಖಕರ ಕಾದಂಬರಿ ರಚನೆಯ ಕಾಲಕ್ಕೆ ಉಪಲಬ್ಧವಿತ್ತೆಂಬುದನ್ನು ಮರೆಯುವಂತಿಲ್ಲ. ಹಾಗೆಯೇ 'ಚಿಕವೀರರಾಜೇಂದ್ರ' ಕಾದಂಬರಿಯನ್ನು ಕುರಿತು ಈವರೆಗೆ ನಡೆದಿರುವ ವಿಮರ್ಶೆಗಳನ್ನು ಪರಿಶೀಲಿಸಿದಾಗ ಇನ್ನೊಂದು ಮುಖ್ಯಾಂಶ ಗೋಚರವಾಗುತ್ತದೆ; ಅದೆಂದರೆ, ಸ್ವತಃ ಚರಿತ್ರೆಗಾರರ ಪ್ರಕಾರ ವೀರರಾಜನ ಪಾತ್ರದ ಸ್ವರೂಪವೇನೆಂಬುದನ್ನು ವಿಮರ್ಶಕರು ತಿಳಿಯಲಿಚ್ಛಿಸಿದ್ದಂತೆ ತೋರುವುದಿಲ್ಲ. ಇಲ್ಲಿ ಇತಿಹಾಸದ ವಸ್ತುವನ್ನಾಧರಿಸಿ ಪುನಃ ಸೃಷ್ಟಿಯಾದ ಕಲಾಕೃತಿಯನ್ನಷ್ಟೇ ಪರಿಭಾವಿಸಬೇಕೆಂಬ

ಪ್ರಾಪ್ತವಾಗುವಂತೆಯೇ ಕತೆಯನ್ನು ಮುನ್ನಡೆಸುವ ಕಾದಂಬರಿಕಾರನ ಪ್ರತಿಭೆಗೂ ಒಂದು ಸವಾಲು ಪ್ರಾಪ್ತವಾಗುತ್ತದೆ. ಚನ್ನಬಸವಯ್ಯ ಮತ್ತು ದೇವಮ್ಮಾಜಿ ಅಪ್ಪಂಗೊಳದ ಅರಮನೆಯ ಸೆರೆಯಿಂದ ತಪ್ಪಿಸಿಕೊಂಡು ಚೋಮ ಮುಂತಾದ ಸೈನಿಕರೊಡನೆ ಕೊಡಗಿನ ಗಡಿಯನ್ನು ದಾಟುವಾಗ, ಮಗುವನ್ನು ತೊಟ್ಟಿಲಿನಿಂದ ಚೆಲ್ಲಿಕೊಂಡು ಹೋದದ್ದು, ಮತ್ತೆ ಮಗುವನ್ನು ಹುಡುಕಿಕೊಂಡು ಚೋಮ ಹಿಂದಕ್ಕೆ ಬರುವುದು ಆ ವೇಳೆಗೆ ಮಗು ಗಡಿ ಸೈನಿಕರ ಕೈಗೆ ಸಿಗುವುದು, ಒಟ್ಟು ಈ ಪ್ರಕರಣವೆಲ್ಲಾ ತುಂಬಾ ಬಾಲಿಶವಾಗಿ ಕಾಣುತ್ತದೆ. ಏಕೆಂದರೆ, ಕುದುರೆ ಸವಾರಿಯಲ್ಲಿ ದೂರದ ಪಯಣ ಮಾಡುವವರು ಮಗುವನ್ನು ಬೆನ್ನಿಗೆ ಕಟ್ಟಕೊಂಡು ಕುದುರೆ ಸವಾರಿ ಮಾಡುವುದು ಸಂಭವನೀಯ ಮಾತ್ರವಲ್ಲ ಅದು ಇದ್ದುದರಲ್ಲಿ ಸುರಕ್ಷಿತ (safety) ಕ್ರಮವೂ ಹೌದೆಂಬುದು ಸಾಮಾನ್ಯ ತಿಳುವಳಿಕೆ. ಅದೇ ಮಗುವನ್ನು ತೊಟ್ಟಿಲಲ್ಲಿ ಇಟ್ಟುಕೊಂಡು, ತೊಟ್ಟಿಲನ್ನು ಕುದುರೆಗೆ ಕಟ್ಟಿಕೊಂಡು ಸವಾರಿ ಮಾಡುವುದು ಸಂಭವನೀಯವೆನಿಸುವಂತಿಲ್ಲ. ಅದರಲ್ಲೂ ರಾಜ ಖೈದಿಗಳಾದ ಇವರು ಕಳ್ಳಮಾರ್ಗದಲ್ಲಿ ಅದೂ ಮಲೆನಾಡಿನಂಥ ಕಾಡಿನ ಮಾರ್ಗದಲ್ಲಿ ದೌಡಾಯಿಸುತ್ತಿರುವ ಕುದುರೆಯ ಅತ್ಯಂತ ಅಪಾಯಕಾರಿ ದೌಡಿನಲ್ಲಿ ತೊಟ್ಟಿಲನ್ನು ಕುದುರೆಗೆ ಬಿಗಿದುಕೊಂಡು ಅದರಲ್ಲಿ ಮಗುವನ್ನು ಸಾಗಿಸುವುದು ಯೋಚನೆಗೂ ನಿಲುಕದ ಬಾಲಿಶ ಕಲ್ಪನೆ. ಅಲ್ಲದೆ ಕುದುರೆ ವಿದ್ಯೆಯಲ್ಲಿ ಹುಟ್ಟುತ್ತಲೇ ನೈಪುಣ್ಯ ಪಡೆದು ಬೆಳೆಯುವ ರಾಜಮನೆತನದ ಜನರನ್ನು ಈ ವಿಚಾರದಲ್ಲಿ ಇಷ್ಟೊಂದು ದಡ್ಡರನ್ನಾಗಿ ಮಾಡಿರುವುದು, ಕೇವಲ ಕಥೆಯನ್ನು ಮುಂದೆ ಸಾಗಿಸಲು ಲೇಖಕರು ಮಾಡಿಕೊಂಡಿರುವ ಅಪಕ್ವ ತಂತ್ರವೇ ಹೊರತು, ರಾಜಕುಮಾರಿಯಾದ

---

ಸಮಾಧಾನ ಮೂಲವನ್ನು ತಿಳಿಯಬೇಕೆಂಬ ಇಚ್ಛೆಯನ್ನು ಪ್ರೋತ್ಸಾಹಿಸದೇ ಹೋಗಬಹುದು. ಆದರೆ, ಅದರ ಮೂಲ ಉಪಲಬ್ಧವಿದ್ದಾಗ, ಮೂಲ ಮತ್ತು ಪುನಃಸೃಷ್ಟಿಗಳೆರಡನ್ನೂ ಕುರಿತ ಪ್ರಸ್ತುತ ತೌಲನಿಕ ಪರಿಶೀಲನೆಯಿಂದ ಕೃತಿಯ ಮೌಲಿಕತೆಗೊಂದು ಸೋಪಜ್ಞ ನೆಲೆ ಪ್ರಾಪ್ತವಾದಂತಾಗುವುದು ಮಾತ್ರವಲ್ಲದೆ, ತತ್ಸಂಬಂಧಿತ ಯುಗಧರ್ಮದ ಜೀವನ ಸಮಗ್ರವನ್ನೂ ದರ್ಶಿಸುವ ಮೂಲಭೂತ ಪ್ರಯತ್ನವಾಗುತ್ತದೆಂಬುದನ್ನು ಅಲ್ಲಗಳೆಯಲು ಸಾಧ್ಯವಿರುವಂತಿಲ್ಲ. ಆದ್ದರಿಂದ ಪ್ರೊ. ಕುರ್ತಕೋಟಿ ಮತ್ತು ಶೇಷಗಿರಿರಾವ್ ಮುಂತಾದ ವಿದ್ವಾಂಸರು ಈ ಕೃತಿಯನ್ನು ವಿಮರ್ಶಿಸುವಾಗ ಅದರ ಮೆಚ್ಚಿಕೆಯ ಭಾಗವನ್ನು ಮಾತ್ರ (ಅಭಿನಂದನಾ ಗ್ರಂಥಕ್ಕಾಗಿ–ಶ್ರೀನಿವಾಸ–ಪು. ೧೪೧–೫೧) ಮೆಚ್ಚುತ್ತ ಮೂಲದ ಇತಿಹಾಸವನ್ನು ಪರಿಶೀಲಿಸದೇ ಹೋದುದರಿಂದ ಇತಿಹಾಸವನ್ನು ಐತಿಹಾಸಿಕ ಪಾತ್ರವನ್ನೂ ಪೂರ್ಣದೃಷ್ಟಿಯಿಂದ ಪರಿಭಾವಿಸಿದಂತಾಗಲಿ, ಪುನಃ ಸೃಷ್ಟಿತ ಕಲಾಕೃತಿಯ ಸೋಲು ಗೆಲುವುಗಳ ನಿರ್ಣಯಕ್ಕೊಂದು ವ್ಯಾಪಕವಾದ ನೆಲೆ ಲಭ್ಯವಾದಂತಾಗಲಿ ಆಗಲಾರದು. ಶೇಷಗಿರಿರಾವ್ ಮಾತ್ರ, ಇದೊಂದು ಶ್ರೇಷ್ಠ ಐತಿಹಾಸಿಕ ಕಾದಂಬರಿಯೆಂಬುದನ್ನು ಸ್ಥಾಪಿಸುವ ಅವರ ಹುಮ್ಮಸ್ಸಿನಿಂದಾಗಿ, ಅದರ ಇತಿಮಿತಿಗಳನ್ನು ಗಂಭೀರ ಪರಿಶೀಲನೆಗೆ ಒಳಪಡಿಸುವ ಗೋಜಿಗೇ ಹೋದಂತಿಲ್ಲ (ತರಂಗ, ೨೯ ಜುಲೈ ೪, ಆಗಸ್ಟ್ ೧೯೮೪, ಪು. ೨೫–೬).

ದೇವಮ್ಮಾಜಿಗಾಗಲಿ, ಅರಮನೆ ಅಳಿಯನಾದ ಚೆನ್ನಬಸವಯ್ಯನಿಗಾಗಲಿ ಮಗುವನ್ನು ಸಾಗಿಸುವ ಈ ಸಣ್ಣ ವಿಷಯ ಗೊತ್ತಿರಲಿಲ್ಲವೆಂದಲ್ಲ. ಆದರಲ್ಲೂ ಮುಖ್ಯವಾಗಿ, ತೊಟ್ಟಿಲಿಂದ ಹಾಗೆ ಚೆಲ್ಲಿಕೊಂಡ ಮಗು ಕೆಳಗೆ ಬಿದ್ದ ಕೂಡಲೆ ಕಿಟಾರನೆ ಕಿರುಚಿಕೊಂಡದ್ದಾಗಲಿ ಅಥವಾ ಅದು ಕುದುರೆ ಸವಾರರಿಗೆ ಕೇಳಿಸದೇ ಹೋದದ್ದಾಗಲಿ ಮೊದಲನೆ ಪವಾಡ. ಕುದುರೆಯ ಸಾಮಾನ್ಯ ಎತ್ತರ ಸುಮಾರು ಆರು ಅಡಿಗಳೆಂದು ಭಾವಿಸಿದರೂ, ಅಷ್ಟು ಎತ್ತರದಿಂದ ಕಾಡಿನ ನೆಲದ ಮೇಲೆ ಬಿದ್ದ ನಾಕೈದು ತಿಂಗಳ ಹಸಿಮಾಂಸದ ಮುದ್ದೆಯಂಥ ಮಗುವಿಗೆ ಏನೊಂದು ಆಗದೆ, ಸೊಗಸಾಗಿ ರಾಜನಲ್ಲಿಗೆ ತಂದದ್ದು ಎರಡನೆಯ ಬಹು ಮುಖ್ಯ ಪವಾಡ. ಇನ್ನು ಮೂರನೆಯ ಪವಾಡವೆಂದರೆ, ಒಂದು ಕಡೆ ತೊಟ್ಟಿಲನ್ನು ಕುದುರೆಗೆ ಕಟ್ಟಿಕೊಂಡು ಹೋದರೆಂದು ಲೇಖಕರು ಬರೆಯುತ್ತಾರೆ (ಪು. ೩೨೧-೫). ಇನ್ನೊಂದು ಕಡೆ, ಅಪ್ಪಂಗೊಳದ ಅರಮನೆಯ ಕಾವಲುಗಾರರ ನಾಯಕ ಅನುಮಾನದಿಂದ ಅಂತಃಪುರವನ್ನು ಹೊಕ್ಕಿ ನೋಡಿದರೆ, ಅಲ್ಲಿ ಖಾಲಿ ತೊಟ್ಟಿಲು ಬಿದ್ದಿತ್ತೆಂದು (ಪು. ೩೩೭) ತೋರಿಸುತ್ತಾರೆ. ಹೀಗಾಗಿ ಕುದುರೆಗೆ ತೊಟ್ಟಿಲು ಕಟ್ಟಿಕೊಂಡು ಮಗು ಸಾಗಿಸುವ ಲೇಖಕರ ತಂತ್ರದಿಂದ ರಾಜಮನೆತನದ ಕುದುರೆ ಸವಾರಿ ನಿಪುಣರನ್ನು ದಡ್ಡರನ್ನಾಗಿಸಿದುದು ಮಾತ್ರವಲ್ಲದೆ, ಅದೇ ತೊಟ್ಟಿಲ ತಂತ್ರದಿಂದಾಗಿ ಲೇಖಕರ ಸೃಜನಶೀಲ ಪ್ರತಿಭೆ ಆ ತೊಟ್ಟಿಲಿನಿಂದ ಹೊರಬರಲಾಗಿಯೇ ಇಲ್ಲವೆನಿಸುವಂತಾಗಿದೆ.

ಹೀಗೆ ಲೇಖಕರು ಯಾಕೆ ಇಷ್ಟೊಂದು ದುರ್ಬಲವಾದ ಕಥಾ ತಂತ್ರಕ್ಕೆ ಕಟ್ಟು ಬಿದ್ದು ಅದನ್ನೇ ವಾಸ್ತವವೆಂದು ಓದುಗ ಭಾವಿಸುವಂತೆ ಮಾಡಹೊರಟಿದ್ದಾರೆಂದು ಯೋಚಿಸಿದಾಗ, ಕಥಾಸಂವಿಧಾನದೊಳಗೆ ಉತ್ತರ ಸಿಕ್ಕುತ್ತದೆ. ಈ ಮಗುವಿನ ಪ್ರಕರಣದಿಂದ ಲೇಖಕರು ಸಾಧಿಸಲೆತ್ನಿಸಿರುವ ಬಹು ದೊಡ್ಡ ಸಾಧನೆಯೆಂದರೆ, ವೀರರಾಜನಿಗೆ "ಕಂಸಕಂಟಕ"ವಿದೆಯೆಂದು ಭವಿಷ್ಯ ನುಡಿದ ದೀಕ್ಷಿತನ ಜ್ಯೋತಿ ಶಾಸ್ತ್ರವನ್ನು* ಸತ್ಯಗೊಳಿಸುವುದು. ಅರ್ಥಾತ್, ದೀಕ್ಷಿತನ ಜ್ಯೋತಿಷ್ಯದ ಪ್ರಕಾರ ರಾಜನಿಗೆ ಕಂಸಕಂಟಕ

---

* ಅರಸನಿಗೆ ಕಂಸದೆಶೆ, ದೀಕ್ಷಿತನ ಪಂಚಾಂಗ, ಗ್ರಹಗತಿ ಶಾಂತಿ, ಪೂಜೆ ಮುಂತಾದವನ್ನು ಓದುತ್ತಿರುವಾಗ ಕನ್ನಡದ ಒಂದು ಅಪ್ರೌಢ ಐತಿಹಾಸಿಕ ಸಿನಿಮಾ ನೋಡಿದ ಅನುಭವದಿಂದ ಕಾದಂಬರಿ ಹೊರತಾಗುವುದಿಲ್ಲ. ಅಲ್ಲದೆ ಈ ಕಂಸಯೋಗ ಲೇಖಕರ ಕಥಾ ಚಾಲನೆಗೆ ಸುಲಭದ ದಾರಿಯನ್ನು ಕಾದಂಬರಿಯ ಗಾತ್ರದ ಹೊಟ್ಟೆಗೆ ಕೂಳನ್ನೂ ಒಟ್ಟಿದೆ. ಹಾಗೆಯೇ ಇಲ್ಲೇ ನೆನಪಿಸಬಹುದಾದ ಇನ್ನೊಂದು ಅಂಶವೆಂದರೆ, ಪಾಣಿ ಸೂರ್ಯನಾರಾಯಣ ಹೆಂಡತಿಯನ್ನು ಹುಡುಕಿಕೊಂಡು ಅನ್ವೈರವಾಡಿಗೆ ಬಂದು, ಚಿಕ್ಕ ದೀಕ್ಷಿತ, ಉತ್ತಯ್ಯ ಮತ್ತು ಕಾವಲುಗಾರ ಮಾಚನ ಸಹಾಯದಿಂದ ಮಣಿಸರ ಮಾರುವವನ ವೇಶದಲ್ಲಿ ಅನ್ವೈರವಾಡಿಯನ್ನು ಪ್ರವೇಶಿಸಿ ಮಾತಿನ ದನಿಗಳ ಮೂಲಕ ಸೂರ್ಯನಾರಾಯಣ ಮತ್ತು ಅವನ ಹೆಂಡತಿ ನಾಗಮ್ಮ ಪರಸ್ಪರ ಗುರುತು ಹಚ್ಚಿಕೊಳ್ಳುವ ಪ್ರಸಂಗ ಕೂಡ ಕಲಾತ್ಮಕ ನಾಟಕೀಯ ಚಿತ್ರಣವೆನಿಸದೆ ಸರಳ ಸಿನಿಮೀಯವೆನಿಸುತ್ತದೆ.

ಏದೆಯೊಂದ ಮೇಲೆ ರಾಜವೈರಿಗಳ ಮಗು ರಾಜನ ಕೈಗೆ ಸಿಗುವಂತೆ ಮಾಡಬೇಕು; ತನ್ಮೂಲಕ ಕಂಸ–ಕೃಷ್ಣರ ಪೌರಾಣಿಕ ಅರ್ಥಪರಿವೇಶವನ್ನು ಕಾದಂಬರಿಯಲ್ಲಿ ಸೃಷ್ಟಿಸ ಬೇಕು, ಅದಕ್ಕಾಗಿ ಕಾದಂಬರಿಯೊಳಗೆ ಇಷ್ಟೊಂದು ಪವಾಡಗಳು. ರಾಜ ಮಗು ವನ್ನು ಕೊಂದದ್ದು ಚಾರಿತ್ರಿಕವಾಗಿ ವಾಸ್ತವವೋ ಅಲ್ಲವೋ ಅದು ಅಪ್ರಸ್ತುತ. ಆದರೆ ಚರಿತ್ರೆಯ ವಸ್ತುವನ್ನು ಆಧರಿಸಿ ಮನಃಸೃಷ್ಟಿ ಕಥಾನಕ ಕಲ್ಪನೆ ಚರಿತ್ರೆಗೆ ಬದ್ಧ ವಾಗಿರಬೇಕಾದ ಅಗತ್ಯವಿಲ್ಲವೆಂಬುದು ಸತ್ಯವಾದರೂ, ಮನಃಸೃಷ್ಟಿಯಾದ ಕಥಾನಕ ಕಲ್ಪನೆಯೇ ಅವಾಸ್ತವವೆನಿಸಿ; ಮಗುವಿನ ಪ್ರಕರಣದ ನಂತರ ಕಥಾಚಾಲನೆ ಒಂದು ಗಂಭೀರ ಸವಾಲಾಗಿ ಪರಿಣಮಿಸಬಹುದಾಗಿದ್ದ ಕಥೆಯು ಸಾಂದ್ರತೆ ಜಾಳು ಜಾಳಾಗಿ ಹರಿಯತೊಡಗಿದೆ. ವಾಸ್ತವವಾಗಿ ರಾಜನು ಮಗುವನ್ನು ಕೊಲ್ಲುವ ಸ್ಥಿತಿಗೆ ಹೋದ ದ್ದು ಯಾವುದೇ ರಾಜಮನೆತನಕ್ಕಾದರೂ ಅದೊಂದು ಕೇವಲ ರಾಜಕೀಯ ವಿಷಯ ಮಾತ್ರವೆನಿಸಿ. ಅದರೊಳಗೆ ಸಿಲುಕುವ ಮಾನವೀಯ ಮೌಲ್ಯಗಳೆಲ್ಲಾ ನಾಶವಾಗಿಬಿಡು ತ್ತವೆಂಬುದು ಅನುಭವವೇದ್ಯ. ಆದರೆ, ರಾಜಕೀಯ ಚರಿತ್ರೆಯ ಅದೇ ವಾಸ್ತವ ಸತ್ಯವನ್ನು ಐತಿಹಾಸಿಕ ಕಾದಂಬರಿಕಾರ ತನ್ನ ಕಲಾಕೃತಿಯಲ್ಲಿ ಪುನಃ ಸೃಷ್ಟಿಗೊಳಿಸುವಾಗ ಅಲ್ಲಿನ ರಾಜಕೀಯ ವಿಷಯಗಳು ಎಷ್ಟೇ ಅಮಾನುಷವಾಗಿದ್ದರೂ, ಅವುಗಳ ನಡುವೆ ಕೂಡ ಮಾನವೀಯ ಮೌಲ್ಯಗಳು ಮೂಡುವುದನ್ನು ಐತಿಹಾಸಿಕ ಕಾದಂಬರಿಗಳಲ್ಲಿ ಕಾಣಬಹುದೆಂಬುದನ್ನು ಬಹುಶಃ ಇಲ್ಲಿ ಪಟ್ಟಿಮಾಡಬೇಕಾದ ಅಗತ್ಯವಿದ್ದಂತಿಲ್ಲ. ಆ ಸಲುವಾಗಿಯೇ ಲೇಖಕ ತನ್ನ ಕಥಾನಕ ಕಲ್ಪನೆಯನ್ನು ಒಂದು ಸುಭದ್ರವಾದ ನೆಲೆಯ ಮೇಲೆ ಬೆಳೆಸುತ್ತಾನೆ. ಆದರೆ, ಪ್ರಸ್ತುತ ಮಾಸ್ತಿಯವರು ಕಟ್ಟಿದ ಮಗುವಿನ ಪ್ರಕ ರಣ ನೆಲೆಯಿಲ್ಲದ ಬೆಳವಣಿಗೆಯಾಗಿ, ಆ ಕಲ್ಪನೆ ವಾಸ್ತವ ಕಥಾನಕದೊಡನೆ ಮೈಪಡೆದು ಕೊಂಡು ಮುಂದಿನ ಕಥೆಯನ್ನು ಯಶಸ್ವಿಯನಾಗಿ ಆಗುಮಾಡುವ ಬದಲು, ಕೇವಲ ರಾಜವೈರಿಗಳ ಮಗುವನ್ನು ರಾಜನ ಕೈಗೆ ಸಿಗಿಸಿ, ಪೌರಾಣಿಕಾರ್ಥ ಛಾಯೆಯನ್ನು ಸೃಷ್ಟಿಸಬೇಕೆಂಬ ಹಟಮಾರಿ ಉದ್ದೇಶಕ್ಕೆ ಕಟ್ಟುಬಿದ್ದು, ದೊರೆಯ ದಾರ್ಷ್ಟ್ಯಕ್ಕೂ ದೀಕ್ಷಿತನ ಜ್ಯೋತಿಶ್ಶಾಸ್ತ್ರಕ್ಕೂ ಮಗುವಿನ ಪ್ರಾಣವನ್ನು ಹಂಚಿದಂತಾಗಿದೆ.

ಹೀಗೆ ಕೃತಿಸಂದರ್ಭದಲ್ಲಿನ ಹಲವಾರು ಮಿತಿಗಳಿಂದಾಗಿ ಕಥಾನಕ ಕಲ್ಪನೆಯ ಸಂವಿಧಾನವೇ ಜಾಳುಜಾಳಾದಂತಾಗಿದೆ. ಇಲ್ಲಿ ಉಲ್ಲೇಖಿಸಬಹುದಾದ ಇನ್ನೊಂದು ಅಂಶ ವೆಂದರೆ, ಪುಟ ೨೬೨ ರಿಂದ ೨೮೪ರವರೆಗಿನ ಸುಮಾರು ಐದು ಅಧ್ಯಾಯಗಳು ಕಾದಂಬ ರಿಯ ಒಟ್ಟು ಶಿಲ್ಪಕ್ಕೆ ಯಾವ ಥರದ ಕೊಡುಗೆಯೂ ಆಗುವುದಿಲ್ಲ. ಅವುಗಳೆಂದರೆ, ಒಂದು ಕೊಡುಗರ ಕೈಲು ಹಬ್ಬ, ಇನ್ನೊಂದು ಕ್ರೈಸ್ತ ಮತ್ತು ಹಿಂದೂ ಮತಗಳನ್ನು ಕುರಿತ ಚರ್ಚಾಗೋಷ್ಠಿ. ಮೊದಲನೆಯದು ಕೊಡುಗರ ಜಾನಪದ ಸಂಸ್ಕೃತಿಯನ್ನು ಕುರಿತ ವರದಿಯಾದರೆ, ಎರಡನೆಯದಾದ ಮಾತುಗಳನ್ನು ಕುರಿತ ಚರ್ಚಾಗೋಷ್ಠಿ, ಲೇಖಕರ ವಾಚಾಳಿತನಕ್ಕೆ ಕೃತಿಯ ಪ್ರಬಂಧಶಿಲ್ಪಿ ಬಲಿಯಾದಂತಾಗಿದೆ. ಅಂದರೆ ಈ ಪ್ರಕರಣಗಳನ್ನು ಕಾದಂಬರಿಯ ಚೌಕಟ್ಟಿನೊಳಗೆ ಮಂಡಿಸುವುದರಿಂದ ಮಹತ್ವದ್ದೇನ

ನ್ನಾದರೂ ಸಾಧಿಸಿದ್ದರೆ ಈ ಪ್ರಶ್ನೆ ಉದ್ಭವಿಸುತ್ತಿರಲಿಲ್ಲ. ಉದಾಹರಣೆಗೆ, ರಾಜ ಮತ್ತು ಮಂತ್ರಿ ಬಸವರನ್ನು ಅಣಕಿಸುವ ನಾಟಕವಾಡಿದ್ದು ರಾಜನ ಪಾತ್ರದ ಮೇಲೆ ಅಥವಾ ಇಡೀ ಕಥೆಯ ಕೇಂದ್ರ ಕ್ರಿಯೆಯ ಮೇಲೆ ನವಿರಾದ ಪರಿಣಾಮ ಬೀರಿ ಕಥಾ ಚಲನೆಯನ್ನೂ, ಸಾಂದರ್ಭಿಕ ಅರ್ಥಭಾವಗಳನ್ನು ತೀವ್ರಗೊಳಿಸುತ್ತದೆ. ಆದರೆ ಈ ಬಗೆಯ ಯಾವುದೇ ಪರಿಣಾಮವನ್ನು ಮತಜಿಜ್ಞಾಸೆಯಿಂದ ಕಾಣಲಾಗದು. ಆದ್ದರಿಂದ ಈ ಮತಜಿಜ್ಞಾಸೆಯಲ್ಲಿ ಕ್ರೈಸ್ತಪಾದ್ರಿ ಮೇಗಲಿಂಗ, ದೀಕ್ಷಿತನನ್ನು ಸೋಲಿಸುವುದರಿಂದಾಗಲಿ ಅಥವಾ ಭಗವತಿ ಮೇಗಲಿಂಗನನ್ನು ಸೋಲಿಸುವುದರಿಂದಾಗಲೀ ಕಾದಂಬರಿಗೇನೂ ಪ್ರಯೋಜನವಾದಂತಿಲ್ಲ.

ಐತಿಹಾಸಿಕ ಕಾದಂಬರಿ ಎನಿಸಿಕೊಳ್ಳುವಲ್ಲಿ ಇದಕ್ಕಿರುವ ಇನ್ನೊಂದು ಮಿತಿಯೆಂದರೆ, ಕಾದಂಬರಿಯ ಪ್ರಕಾರ ಇಡೀ ಕೊಡಗು ಸಾಮ್ರಾಜ್ಯದ ಪತನಕ್ಕೆ ಕೇವಲ ಅರಮನೆಯ ವಿದ್ಯಮಾನಗಳಷ್ಟೇ ಕಾರಣಗಳೆನಿಸಿಕೊಳ್ಳುತ್ತವೆ. ಅಂದರೆ, ಕೊಡಗಿನ ಅರಮನೆ, ರಾಜಮನೆತನದ ಕೆಲವು ಸಂಬಂಧಿಕರು, ಚಿಕ್ಕಣ್ಣ ಶೆಟ್ಟಿಯಂಥ ಕೆಲವು ವರ್ತಕರು ಮತ್ತು ದೀಕ್ಷಿತನಂಥ ರಾಜಪುರೋಹಿತರೇ ಮುಂತಾದ ಮೇಲುವರ್ಗದ ಕೇವಲ ಕೆಲವು ಮಂದಿ ಮಾತ್ರ ಕಾದಂಬರಿಯ ಸಂವಿಧಾನದೊಳಗೆ ಕಾಣಿಸಿಕೊಳ್ಳುವುದರಿಂದಲೂ, ಒಂದು ಸಾಮ್ರಾಜ್ಯದ ಪತನದ ಆರಂಭದಿಂದ ಅಂತ್ಯದವರೆಗಿನ ಅವಧಿಯಲ್ಲಿ ಇನ್ನೊಂದು ವರ್ಗವಾದ ಸಾಮಾನ್ಯ ಜನಸಮುದಾಯದ ಪ್ರತಿಕ್ರಿಯೆ ಕಥಾಸಂವಿಧಾನದೊಳಗೆ ಅತ್ಯಂತ ಗೌಣಗೊಂಡಿರುವುದರಿಂದಲೂ ಕಾದಂಬರಿಯ ಅರಹುವಿಗೆ ಪ್ರಾಪ್ತವಾಗಬೇಕಿದ್ದ ಐತಿಹಾಸಿಕತೆಯ ವ್ಯಾಪಕ ಚಿತ್ರ ಅಪೂರ್ಣವೆನಿಸುತ್ತದೆ. ಅರ್ಥಾತ್, ಯಾವುದೇ ರಾಜ್ಯ ವ್ಯವಸ್ಥೆಯಲ್ಲಿ ಅತ್ಯಂತ ಸಾಮಾನ್ಯವಾದ ರೂಢಿಯಲ್ಲಿ ಕರೆಯಬಹುದಾದ ಮೇಲುವರ್ಗ ಕೆಳವರ್ಗ ಹಾಗೂ ಮಧ್ಯಮ ವರ್ಗಗಳನ್ನು ವಾಸ್ತವವಾಗಿಯೇ ಪ್ರತಿನಿಧಿಸಬೇಕಾಗಿದ್ದ ಪಾತ್ರಗಳ ಪರಸ್ಪರ ಪ್ರವರ್ತನೆ (interaction) ಯ ಚಿತ್ರಣ ಕೃತಿಯಲ್ಲೂ ಮೂಡಿಲ್ಲದಿರುವುದರಿಂದ ಕಾದಂಬರಿ ಸೃಷ್ಟಿಸಿಕೊಡಬೇಕಾಗಿದ್ದ ಐತಿಹಾಸಿಕ ಚಿತ್ರಣ ಊನಗೊಂಡಂತಾಗಿ, ಈಗಾಗಲೇ ಹೇಳಿರುವಂತೆ ಈ ಐತಿಹಾಸಿಕ ಕಾದಂಬರಿಯ ಸೋಲಿಗಿರುವ ಬಹು ಮುಖ್ಯ ಕಾರಣಗಳಲ್ಲಿ ಇದು ಪ್ರಧಾನವಾದುದೆನಿಸುತ್ತದೆ [1]. ಹಾಗೆಯೇ

---

1 ಈ ರಾಜಾ ಮಂತ್ರಿಯನ್ನು ಅಣಕಿಸುವ "ಕೊಡುಗ ರಾಜ" ನಾಟಕ, ಶೇಕ್ಸ್‌ಪಿಯರ್‌ನ "ಹ್ಯಾಮ್ಲೆಟ್" ನಾಟಕದಲ್ಲಿ ದೊರೆ ಹ್ಯಾಮ್ಲೆಟ್‌ನನ್ನು ಮೋಸದಿಂದ ಕೊಂದು ತಾನೇ ದೊರೆಯಾದ ಕ್ಲಾಡಿಯಸ್‌ನನ್ನು ಅಣಕಿಸುವ "Mouse trap" (Act 3, Scene. 2, Line-234) ನಾಟಕವನ್ನು ನೆನಪಿಸುತ್ತದೆ. ಆದರೆ ಹ್ಯಾಮ್ಲೆಟ್ ನಾಟಕದ ಸಂದರ್ಭದಲ್ಲಿ ದೊರೆಯನ್ನು ಮೋಸದಿಂದ ಕೊಂದು ಕ್ಲಾಡಿಯಸ್ ತಾನೇ ರಾಜನಾದುದೇ ಅಲ್ಲದೆ, ಡೆನ್ಮಾರ್ಕ್ ಸಾಮ್ರಾಜ್ಯದ ರಾಣಿಯನ್ನೂ ವರಿಸುವುದರಿಂದ ಕ್ಲಾಡಿಯಸ್‌ನ ಅಂತಃಕರಣ ಅತ್ಯಂತ ಕಲುಷಿತಗೊಂಡಿರುತ್ತದೆ. ಅಂತೆಯೆ ಆ ಕಲುಷಿತಗೊಂಡ ಹೃದಯದ ಪಾಪಪ್ರಜ್ಞೆಯನ್ನು ಹೊರಹಾಕುವ, ಆ ನಾಟಕ ಸೃಷ್ಟಿಸುವ

ಇನ್ನೊಂದು ಗಮನಾರ್ಹ ಸಂಗತಿಯೆಂದರೆ, ಭೌಗೋಳಿಕವಾಗಿ ದುರ್ಗಮವೆನಿಸುವ ಕೊಡಗಿನ ಪ್ರಾಕೃತಿಕ ವ್ಯಾಪಾರಗಳನ್ನು ಅಥವಾ ಕಾದಂಬರಿ ಪ್ರತಿಬಿಂಬಿಸುವುದಿಲ್ಲವಾದ ಕಾರಣ, ಕಾದಂಬರಿಯ ಸಂಪೂರ್ಣ ಕ್ರಿಯೆ ಆ ಭೌಗೋಳಿಕ ದುರ್ಗಮ ಸನ್ನಿವೇಶದಲ್ಲಿ ನಡೆಯುತ್ತದೆಯೆಂದೆನಿಸುವುದಿಲ್ಲ. ಮಲೆನಾಡ ಪ್ರಾಂತದಲ್ಲಿ ವಿಶಿಷ್ಟವೆನಿಸುವ ಕೊಡಗರ ಜೀವನದ ವೈವಿಧ್ಯತೆಗಳು ಹಾಗೂ ಅವರ ಸಾಂಸ್ಕೃತಿಕನಡಾವಳಿಗಳು ಸೂಕ್ಷ್ಮವಾಗಿ ಕಾದಂಬರಿಯಲ್ಲಿ ಎಲ್ಲೂ ಚಿತ್ರಣಗೊಂಡಿಲ್ಲ. ಈ ಮೊದಲೇ ಹೇಳಿರುವಂತೆ ಕೊಡಗಿನ ಸಾಮಾನ್ಯ ಪ್ರಜಾಸಮುದಾಯ ನಾಡಿನ ರಾಜಕೀಯ ವಿಷಮತೆಗೆ ಪ್ರತಿಕ್ರಿಯಿಸುವ ಸನ್ನಿವೇಶಗಳಲ್ಲದೆ, ಮೇಲುವರ್ಗದ ಕೆಲವು ಪಾತ್ರಗಳು ಮಾತ್ರ ಕಾಣಿಸಿಕೊಳ್ಳುವ ಒಂದು ಮುಖ್ಯವಾದ ಕೊರತೆಯಿಂದಾಗಿ ವೀರರಾಜನ ಆಡಳಿತದ ಹದಿನಾಲ್ಕನೆ ವರ್ಷದಲ್ಲಿ ಕೊಡಗಿನ ಜನಜೀವನದಲ್ಲಿ ಉಂಟಾದ ರಾಜಕೀಯ ಆರ್ಥಿಕ ವಿಷಮತೆಗಳ ಜಟಿಲತೆಯನ್ನು ಪ್ರತಿಬಿಂಬಿಸುವ ಐತಿಹಾಸಿಕ ಚಿತ್ರಣ ಮೂಡಿಸುವಲ್ಲಿ ಕಾದಂಬರಿ ಸೋಲುತ್ತದೆ [2].

---

ದುರಂತ ಚಿತ್ರಣಕ್ಕೂ, ಇಲ್ಲಿನ "ಕೊಡುಗ ರಾಜ" ನಾಟಕದಿಂದ ಮೂಡುವ ಗೇಲಿ ಅಥವಾ ತಮಾಷೆಗೂ ಬೇಕಾದಷ್ಟು ಅಂತರವಿದೆ. ಜೊತೆಗೆ ಅಲ್ಲಿ ಕ್ಲಾಡಿಯಸ್‌ನ ಸುತ್ತಲಿನ ಪಾಪಪ್ರಜ್ಞೆಯ ಮತ್ತು ದುರಂತದ ಆವರಣಕ್ಕೂ, ಇಲ್ಲಿ ವೀರರಾಜನ ಸ್ವೇಚ್ಛಾಚಾರ ಮತ್ತು ಹುಡುಗಾಟಿಕೆಯ ಆವರಣಕ್ಕೂ ಆನೆ ಆಡಿನಷ್ಟು ಅಂತರವಿದೆ. ಆದ್ದರಿಂದ ಇಲ್ಲಿನ 'ಕೊಡುಗ ರಾಜ' ನಾಟಕ ಅಲ್ಲಿ Play within the play ಎನಿಸುವ "Mouse trap" ನಾಟಕದ ವಿಕೃತ ನಕಲೆನ್ನಬಹುದು.

---

1 ಇಲ್ಲಿ ರಾಜ ಸೆರೆಯಾಗಿ ಮಂತ್ರಿ ಬೋಪಣ್ಣ ಮತ್ತು ಲಕ್ಷ್ಮೀನಾರಾಯಣಯ್ಯರ ಸಮಕ್ಷಮದಲ್ಲಿ ಬ್ರಿಟಿಷ್ ಅಧಿಕಾರಿಗಳು ರಾಜ್ಯದ ಆಡಳಿತದ ಬಗೆಗಿನ ಕೆಲವು ನಿರ್ಣಯಗಳನ್ನು ಬಹಿರಂಗ ಸಭೆಯಲ್ಲಿ ಪ್ರಕಟಿಸುವ ಸಂದರ್ಭವನ್ನುಳಿದರೆ ಬೇರೆಲ್ಲೂ ಪ್ರಜಾಸಮುದಾಯದ ಪ್ರತಿಕ್ರಿಯೆ ಉಂಟಾಗುವುದಿಲ್ಲ.

2 ಈ ಕಾದಂಬರಿಯಲ್ಲಿ ಮಲೆನಾಡಿನ ನೈಸರ್ಗಿಕ ವೈವಿಧ್ಯತೆಯ ಚಿತ್ರಣ ಇಲ್ಲವಾಗಿರುವುದಕ್ಕೆ ಬಹು ಮುಖ್ಯವೆನಿಸುವ ಒಂದು ಕಾರಣ ಗೋಚರವಾಗುತ್ತದೆ. ಪುಟ್ಟಪ್ಪನವರ ಕಾದಂಬರಿಗಳಲ್ಲಿ ಕಾಣುವ ಮಲೆನಾಡಿನ ಈ ನೈಸರ್ಗಿಕ ವೈವಿಧ್ಯತೆ ಅಲ್ಲಿನ ಪಾತ್ರ ಪರಿಸರಗಳ ಅಥವಾ ಸಮಸ್ತ ಜನಜೀವನದೊಡನೆ ಒಕ್ಕೂಳ ಸಂಬಂಧವನ್ನು ಹೊಂದಿದ್ದು, ಅದು ಅವರ ಕಾದಂಬರಿಗಳ ಯಶಸ್ಸಿಗೂ ಕಾರಣವಾಗುತ್ತದೆ. ಆದರೆ ಆ ಬಗೆಯ ಕಾರಣೀಭೂತ ಕ್ರಿಯೆ 'ಚಿಕವೀರರಾಜೇಂದ್ರ'ದಲ್ಲಿ ಕಾಣಸಿಗುವುದಿಲ್ಲ. ಬಹುಶಃ ಇದಕ್ಕಿರುವ ಕಾರಣವೆಂದರೆ, ವೃತ್ತಿಯಿಂದ ಆಡಳಿತಗಾರರೆನಿಸಿದ ಮಾಸ್ತಿ ಕೃತಿಯ ಕಲಾತ್ಮಕ ವರ್ಣನೆಯ ಸಮಯದಲ್ಲಿ ಕವಿ ಹೃದಯವುಳ್ಳ ಒಬ್ಬ ಪ್ರವಾಸಿಗರೆನಿಸಿದರೆ, ವೃತ್ತಿಯಿಂದ ಸಾಹಿತ್ಯದ ಪ್ರಾಧ್ಯಾಪಕರೆನಿಸಿದ ಪುಟ್ಟಪ್ಪ ಕವಿ ಹೃದಯವುಳ್ಳ ಒಬ್ಬ ಕವಿಯೇ ಎನಿಸುತ್ತಾರೆ. ಅಂದರೆ ಈ ಅಭಿಪ್ರಾಯ ಮಾಸ್ತಿ ಮತ್ತು ಪುಟ್ಟಪ್ಪನವರನ್ನು ಮಾತ್ರ ಕುರಿತಿರುತ್ತದೆ.

ಇನ್ನು ಈ ಕಾದಂಬರಿಯಲ್ಲಿ ಬಳಸಲಾಗಿರುವ ಭಾಷೆಯ ಬಗ್ಗೆ ಒಂದೆರಡು ಮಾತು. ಲೇಖಕರೇ ಹೇಳುವಂತೆ, ಕೊಡಗಿನ ಆ ಕಡೆ ಕೇರಳ, ಈ ಕಡೆ ಮೈಸೂರು ಮತ್ತೊಂದು ಕಡೆ ಮಂಗಳೂರು (ಪು ೩) ಅಂದರೆ, ಈ ನಡುವೆ ನಿಂತಿರುವ ಕೊಡಗಿನ ಕನ್ನಡ ಭಾಷೆ ಮಲೆಯಾಳಂ, ತುಳು, ಕೊಂಕಣಿ ಹಾಗೂ ಕೊಡವ ಭಾಷೆಗಳ ನಡುವೆ ಸಿಲುಕಿದೆ. ಅರ್ಥಾತ್, ಇದು ಕನ್ನಡದ ಒಂದು ಉಪಭಾಷೆ (dialect) ಎಂಬುದರಲ್ಲಿ ಸಂಶಯವಿಲ್ಲ. ಆದರೆ ಮಾಸ್ತಿಯವರು ಈ ಕಾದಂಬರಿಯಲ್ಲಿ ಬಳಸಿರುವ ಭಾಷೆ ಆ ಉಪಭಾಷೆಯೆನ್ನಲಿಕ್ಕೆ ಸಾಧ್ಯವಿಲ್ಲವೆಂಬುದು ವರ್ಣನಾತ್ಮಕ ಭಾಷಾವಿಜ್ಞಾನ (Descriptive Linguistics)ದ ಯಾವ ವಿದ್ಯಾರ್ಥಿಗಾದರೂ ಅರ್ಥವಾಗಬಹುದಾದ್ದು. ಉದಾಹರಣೆಗೆ, ಕಾದಂಬರಿಯೊಳಗಿನ ಸಂಭಾಷಣೆಯ ಕೆಲವು ವಾಕ್ಯ ಲಹರಿಗಳನ್ನು ಪರಿಶೀಲಿಸಬಹುದು. ಕುಂಟ ಬಸವ, "ಲೋ ಬರತಾ ಈ ಬಾಗಿಲು ಹಾಕಿಕೊಂಡು ಬಾ ಎಂತ ಹೇಳಿದನಲ್ಲ, ತರೆದೇ ಬಂದ್ಯ ನನ್ನ ಪ್ರಾಣಕೆ ತರೋಕೆ, ದೆವ್ವನ ಮುಂಡೇದೆ" (ಪು. ೬). ಬಸವನ ಮತ್ತೊಂದು ವಾಕ್ಯ "ದೆವ್ವನ ಮುಂಡೇದೆ, ಬಾಗಿಲು ಹಾಕಿಕೊಂಡು ಬಾ ಅಂದರೆ ಹಾಗೆಯೇ ಬಂದೆಯಾ? ಇರು ನಿನಗೆ ಮಾಡುತ್ತೇನೆ" (ಪು. ೬) ರಾಜಕುಮಾರಿಯ ವಾಕ್ಯ "ಅವ್ವಾಜಿ ಅತ್ತೆ ಊಟ ಮಾಡೋದಿಲ್ಲ ಅಂತಾರೆ, ನೀವಾದರೂ ಹೇಳಿ ಉಣಲಿ" (ಪು. ೮). ರಾಣಿ ಮತ್ತು ಕುಟುಂಬದವರ ನಡುವೆ ನಡೆಯುವ ಸಂಭಾಷಣೆ ರಾಣಿ, "ನೆನ್ನೆ ರಾತ್ರಿ ಅಕ್ಕಯ್ಯನವರಿಗೆ ತೊಂದರೆ ಕೊಟ್ಟಿರಂತೆ, ಹಂಗೆ ತಿರಗಾ ಎಲ್ಲಾದಾರೂ ಮಾಡೀರಿ ಜೋಕೆ" ಅದಕ್ಕೆ ಬಸವ "ದಣಿಗಳು ನೆನ್ನೆ ಒಳ್ಳೆ ಕುಶಾಲಿದ್ದರವ್ವ. ಮೇಲೆ ತಂಗ್ಯವ್ವನ ನಡುವೆ ತಪ್ಪಾತಂತ ತಿಳಿದರು. ಆದರಿಂದ ಹಂಗೆ ಮಾಡಿದರು"(ಪು. ೧೫) ಎನ್ನುತ್ತಾನೆ. ಈ ಬಗೆಯ ಸಂಭಾಷಣೆಯನ್ನು ಕಾದಂಬರಿಯುದ್ದಕ್ಕೂ ಪರಿಶೀಲಿಸಿದರೆ, ಮಲೆಸೀಮೆಗೆ ವಿಶಿಷ್ಟವಾದ ಭಾಷಾಪ್ರಕಾರವನ್ನು ಈ ಕಾದಂಬರಿಯ ಭಾಷೆ ಪ್ರತಿನಿಧಿಸಲು ಸಾಧ್ಯವಿರುವಂತಿಲ್ಲ; ಬದಲಾಗಿ "ತಂಗ್ಯವ್ವನ ನಡತಿ ತಪ್ಪಾತಂತ ತಿಳಿದರು" ಎಂಬಂಥ ವಾಕ್ಯ ಶೈಲಿಗಳನ್ನು ನೋಡಿದಾಗ, ಇದು ಧಾರವಾಡ ಉಪಭಾಷೆಯನ್ನು ಅಪಕ್ವವಾಗಿ ಪ್ರತಿನಿಧಿಸುತ್ತದೆಯೇ ಹೊರತು, ವಿಶೇಷವಾಗಿ ಕೊಡಗಿನ ಶೈಲಿಯನ್ನಂತೂ ಅಲ್ಲವೆನಿಸುತ್ತದೆ.

ಇಷ್ಟೆಲ್ಲಾ ಮಿತಿಗಳ ನಡುವೆ ಕೂಡ ಕಾದಂಬರಿಯ ಕೆಲವು ಭಾಗಗಳು ಹಾಗೂ ಕೆಲವು ಪಾತ್ರಗಳು ಶಕ್ತಿಯುತವಾಗಿ ಚಿತ್ರಿತವಾಗಿವೆ. ಉದಾಹರಣೆಗೆ: ಭಗವತಿ ಯಾರೆಂಬುದು ದೊಡ್ಡವ್ವನಿಗೆ ಮಾತ್ರ ಗೊತ್ತು (ಪು. ೧೧೪–೧೫). ರಾಜನ ಕಾಯಿಲೆಯ ಸಂದರ್ಭದಲ್ಲಿ ಇಲ್ಲಿ ಆರಂಭಗೊಳ್ಳುವ ಮಲೆಯಾಳಿ ಮದ್ದು ಅಥವಾ ಭಗವತಿಯ ಪಾತ್ರದ ಬಗ್ಗೆ ಒಂದು ಕುತೂಹಲದ ಆರಂಭದ ಎಳೆ ಇಲ್ಲಿ ಕಾಣಿಸಿಕೊಳ್ಳುತ್ತದೆ. ಅಲ್ಲದೆ ಭಗವತಿಯ ಪೂಜೆ ಕೂಡ ಕಾದಂಬರಿಯ ಸಂದರ್ಭದಲ್ಲಿ ತುಂಬಾ ಮುಖ್ಯವೆನಿಸಿ, ಅದರ ನಿವಾರಣೆಯ ಅರಹು ಕೂಡ (೪೬ನೇ ಅಧ್ಯಾಯ) ತುಂಬಾ ವಿಸ್ತಾರವಾಗಿದೆ. ಈ ಪೂಜೆ ಇಲ್ಲಿ ಬಹುಮುಖ್ಯವೆನಿಸಲಿಕ್ಕೆ ಕಾರಣ, ಭಗವತಿ ನೆರವೇರಿಸುವ

ಈ ಪೂಜೆಯ ಪ್ರತಿಯೊಂದು ಅಂಶವನ್ನೂ ಬಸವ ಏಕಾಗ್ರಚಿತ್ತದಿಂದ ಅನುಭವಿಸುತ್ತಾನೆ. ಅದಾಗಿ ಈ ಪೂಜೆಯಿಂದ ಹೊರಡುವ ಧ್ವನಿಗಳೆಂದರೆ, ಮೊದಲನೆಯದಾಗಿ ಈ ದುರ್ಗಾಪೂಜೆ ನಡೆಯುತ್ತಿರುವುದು ರಾಜನ ಆಯುರಾರೋಗ್ಯದ ಸಲುವಾಗಿ. ಆದರೆ ದುರ್ಗಿಯ ಉಪಾಸಕಳಾದ ಭಗವತಿಯಲ್ಲಿ, ತನ್ನ ಮಗನಾದ ಬಸವನಿಗೆ ಕೊಡಗು ಸಾಮ್ರಾಜ್ಯದ ಸಿಂಹಾಸನ ದಕ್ಕಬೇಕೆಂಬ ಅದಮ್ಯ ಹಂಬಲ ಅವಳ ಬದುಕಿನ ಉಸಿರಾಗಿರುತ್ತದೆ. ತತ್ಪರಿಣಾಮವಾಗಿ ಅವಳ ದುರ್ಗಾಪೂಜೆ ತದುದ್ದೇಶಪ್ರಣೀತವೆನ್ನಲಿಕ್ಕೆ ಬರುವಂತಿಲ್ಲ. ಆದ್ದರಿಂದ ಅವಳ ಪಾತ್ರದ ಈ ದ್ವಂದ್ವತೆ ತುಂಬ ಯಶಸ್ವಿಯಾಗಿಯೂ ಶಕ್ತಿಯುತವಾಗಿಯೂ ಮೂಡಿಬಂದಿದೆ. ಎರಡನೆಯದಾಗಿ, ಅದೇ ಸಂದರ್ಭದಲ್ಲಿ ಬಸವ ನಡೆದುಕೊಳ್ಳುವ ನಡವಳಿಕೆಯ ವೈಲಕ್ಷಣ್ಯ ಕೂಡಾ ತುಂಬಾ ಸಂಕೀರ್ಣವಾಗಿ ಮೂಡಿಬಂದಿದೆ. ಏಕೆಂದರೆ ಭಗವತಿಯು ಪೂಜಾವಿಧಾನವನ್ನು ಸ್ವತಃ ವೀಕ್ಷಿಸಿದ ಆ ಸಂದರ್ಭದಲ್ಲಿ ಬಸವನಲ್ಲಿ ಅಪೂರ್ವ ದೈವಭಕ್ತಿ ತುಂಬಿಕೊಳ್ಳದೆ ಅರ್ಥಾತ್ ಅವನ ಈ ಅಪೂರ್ವ ದೈವಭಕ್ತಿಗೆ ಅವನಲ್ಲಿರುವ ನಿಶ್ಚಲ ಸ್ವಾಮಿನಿಷ್ಠೆ ಕಾರಣವೇ ಹೊರತು, ಅದು ಅವನ ವ್ಯಕ್ತಿಗತ ಸಂಸ್ಕೃತಿಯಲ್ಲಿ ರೂಢಿಗತವಾಗಿ ಬಂದಿರುವ ದೈವಭಕ್ತಿಯೇನಲ್ಲ. ಇದೇ ಸಂದರ್ಭದಲ್ಲಿ ನೆನೆಯಬೇಕಾದ ಇನ್ನೊಂದು ಮುಖ್ಯಾಂಶವೆಂದರೆ, ದುರ್ಗಾಪೂಜೆಯ ಸಲುವಾಗಿ ಬಸವ ಮೊಟ್ಟಮೊದಲ ಬಾರಿಗೆ ಭಗವತಿ ಆಶ್ರಮಕ್ಕೆ ಬಂದಾಗ, ಎಷ್ಟೋ ವರ್ಷಗಳ ನಂತರ ಮೊದಲಬಾರಿಗೆ ಮಗನನ್ನು ಕಂಡ ಭಗವತಿ ಭಾವೋದ್ವೇಗದಿಂದ ಅವನನ್ನು ಬಿಗಿದಪ್ಪಿಕೊಂಡು ಮುದ್ದಿಸುತ್ತಾಳೆ. ಅಂದರೆ ಆ ಹೆಣ್ಣಿನ ಅಪ್ಪುಗೆ ಬಸವನಿಗೆ ಆ ಸಂದರ್ಭದಲ್ಲಿ ದಿಗ್ಭ್ರಮೆಯೆನಿಸಿ, ಕ್ರಮೇಣ ಅವನ ಮನಸ್ಸಿನಲ್ಲಿ ಅದು ಕಾಮದ ದಾಹವಾಗಿ ತಿರುಗಿಕೊಳ್ಳತೊಡಗುತ್ತದೆ (ಪು. ೧೩೮). ಜೊತೆಗೆ ಮಾನವರ ಸಂಸರ್ಗವೇ ಇಲ್ಲದೆ, ನಾಯಿಗಳೊಡನಿದ್ದ ಬಸವನನ್ನು ಒಬ್ಬ ಮಾನವನನ್ನಾಗಿ ನಡೆಸಿಕೊಂಡ ವೀರರಾಜನ ಬಗೆಗಿನ ಬಸವನ ಕೃತಜ್ಞತೆ ಕೂಡ ಈ ಸಂದರ್ಭದಲ್ಲಿ ತುಂಬಾ ಜೀವಂತವಾಗಿ ಚಿತ್ರಿತವಾಗಿದ್ದು, ತತ್ಫಲವಾದ ಬಸವನ ಪಾತ್ರ ಚಿತ್ರಣ ಅತ್ಯಂತ ಜಟಿಲವೂ ಸಂಶ್ಲಿಷ್ಟವೂ ಆದುದೆನಿಸಿದೆ. ಆದರೆ ಈ ಎರಡು ಪಾತ್ರಗಳು ಇಡೀ ಕಾದಂಬರಿಯ ದಿಕ್ಕನ್ನೇ ನಿರ್ಣಯಿಸುವಷ್ಟು ಸಮರ್ಥವಾದ ಆರಂಭವನ್ನು ಹೊಂದಿದ್ದರೂ ಅಷ್ಟೇ ಯಶಸ್ವಿಯಾಗಿಯೂ ಕಲಾತ್ಮಕವಾಗಿಯೂ ಅವುಗಳನ್ನು ನಡೆಸಿ ಅಂತ್ಯಗೊಳಿಸಲಾಗದೆ ಹೋದದ್ದಕ್ಕೆ ಬಹುಶಃ ಲೇಖಕರಿಗಿರುವ ಗಂಭೀರವಾದ ಮಿತಿ ಕಾರಣವಿರಬಹುದೆಂದು ತೋರುತ್ತದೆ.

(ಇದು ಪರಿಷ್ಕೃತ ಬರಹ. 'ಸಂಕ್ರಮಣ' ಸಾಹಿತ್ಯ ಮಾಸಿಕದಲ್ಲಿ ಪ್ರಕಟವಾದ ನಂತರ ಚರ್ಚೆ ಆಗುವ ಸಂದರ್ಭದಲ್ಲಿ ಲೇಖಕರು ಮತ್ತೆ ಕೆಲವು ವಿಷಯಗಳಿಗೆ ಒತ್ತು ಕೊಟ್ಟಿರುವುದರಿಂದ ಸಂವಾದಕ್ಕೆ ಯೋಗ್ಯ ದಾರಿ ಆಗುವುದೆಂಬ ಆಶಯದಿಂದ ನಾವೂ ಪ್ರಕಟಿಸುತ್ತಿದ್ದೇವೆ. ಪರಿಷ್ಕೃತ ಬರಹ ಕಳುಹಿಸಿದ 'ಮನಜ' ಅವರಿಗೆ ಕೃತಜ್ಞತೆಗಳು).

— ಸಂಪಾದಕ

# ನನ್ನ ಹೃದಯವಂತನಿಗೆ

○ ಕೆ. ವಿಜಯಲಕ್ಷ್ಮಿ

ಹಾರವರ ಮನೆಯಲ್ಲಿ ಜನಿಸಿದ
ನಾನು, ಸಾದ ಸರಳ ಹುಡುಗಿ.
ಪಂಚಮ ಪುತ್ರಿಯರಲ್ಲಿ ಜೇಷ್ಠಳಾಗಿ
ಇನ್ನೂ ಸಪ್ತಪದಿ ತುಳಿಯದೆ
ಅಪ್ಪ–ಅವ್ವರಿಗೆ ಅನಿಷ್ಟ ಆದವಳು.
ಇಷ್ಟೇ ಹೇಳಿದರೆ ನಿನಗೆ ಅರ್ಥ ಆಗದು.
ಗೆಳೆಯ, ಕಪ್ಪು ಅಲ್ಲ ಇತ್ತ ಬಿಳುಪು ಅಲ್ಲದ
ನಾನು, ಇವೆರಡರ ಮಧ್ಯದ ಬಣ್ಣದವಳು.
ಸುಂದರಿ ಅಲ್ಲದಿದ್ದರೂ
ವಿಲಕ್ಷಣದ ಗುರುತುಗಳಂತೂ ಇಲ್ಲ.
ಜೀವನದ ಆದರ್ಶ ಮೌಲ್ಯಗಳ ಕುರಿತು
ನೀ ತಿಳಿದಷ್ಟು ನಾ ತಿಳಿದಿಲ್ಲ.
ನಿನ್ನಂಥ ಹಲವರ ಜೊತೆ ಇದ್ದರೂ
ಆತ್ಮ ದ್ರೋಹಿಯಂತೂ ಆಗಿಲ್ಲ.
ಗೆಳೆಯ, ನೀ ಇಷ್ಟ ಪಡುವ
ದೇಹ ಸೌಂದರ್ಯಕ್ಕೆ ಕಾಂತಿ ನೀಡುವ ಕುಚಗಳು
ನಾಟ್ಯದ ನಡು, ಉದ್ರೇಕದ ತೊಡೆಗಳು
ಸಮ್ಮೋಹತೆಗೆ ನಿನ್ನ ಒಳ ಮಾಡಿದ ಬಟ್ಟಲು ಕಣ್ಣುಗಳು
—ಇವೆಲ್ಲಾ ನಿನ್ನ ರಾತ್ರಿಯ ಪಟ್ಟದರಸಿಗೆ ಮೀಸಲು.
ಗೆಳೆಯ, ಇಷ್ಟಕ್ಕೆ ಬೆಚ್ಚಿ ಬೀಳಬೇಡ,
ಗಾಜಿನ ಗೊಂಬೆಯಂತೂ ನಾನಲ್ಲ!
ಇದ್ದೇನೆ ನಾರಿಯಂತೆ ಒಂದು ಬಗೆ–
ಸೋತು ಬೆಂಡಾದರೂ ನಗೆಯ ತುಣುಕು
ನೀ ಕೊಡುವ ಆಹ್ವಾನಕ್ಕೆ ಸದಾ ಸಿದ್ಧ.
ಶಾಸ್ತ್ರ, ಸಂಪ್ರದಾಯದ ನಂಜು ಮಾತಿನ
ಬಣ್ಣ ಬಳಿಯುವ ಮನವಿಲ್ಲ–ನನಗೆ.

ಸ್ವಚ್ಛಂದ ಮನಸ್ಸು ವಾಸ್ತವದ ಗ್ರಹಿಕೆ
ತಿಳಿದು ನಡೆಯುವಿಕೆ ನನ್ನ ಒಡವೆ.
ಆಶಾಗೋಪುರಗಳ ಅರಮನೆಯಲ್ಲಿ ವಿಹರಿಸುವ
ಮೋಡದ ಮನೆಯಲ್ಲಿ ತೇಲುವ ಮುನ್ನ
ನಿನಗೊಂದು ಪಿಸುಮಾತು :
ಕನ್ನಡಿಯ ನಿನ್ನ ಬಿಂಬ ಮನ್ಮಥನಂತೆ ಕಂಡರೆ
ನಾನಾಗಲಾರೆ ನಿನ್ನ ರತಿ, ಕ್ಷಮಿಸು.
ಭವಿಷ್ಯದ ನಿನ್ನ ಒಡನಾಟದ ಬಗ್ಗೆ
ಕಾಮನ ಬಿಲ್ಲಿನ ಬಣ್ಣಗಳ
ಮನಸ್ಸಿನ ಬಯಕೆಗಳ ಕುದುರಿಸುವ
ಬಿಸಿಲ್ಗುದುರೆಯ ಹತ್ತಿ ಹಾರುವ
ದೇವರಲ್ಲಿ ಹರಕೆ ಹೊತ್ತು ಉಪವಾಸ ಮಾಡುವ
ಗೊಡ್ಡು ರೀತಿ-ನೀತಿ ನನ್ನಲ್ಲಿಲ್ಲ.
ಹೃದಯವಂತನೇ ನಿನಗೆ ಹೇಳುವುದಿಷ್ಟೆ :
ಮುಂದೊಂದು ದಿನ ಸಪ್ತಪದಿ ತುಳಿವಾಗ
ನಮ್ಮಿಬ್ಬರ ಹಿಂದೆ ಎಲ್ಲವು ಶೂನ್ಯ.
ಗೆಳೆಯ, ನಿನಗೆ ನಾನೊಬ್ಬಳೇ ಸಾಕೆಂದರೆ
ನನ್ನ ಬಾಳಿನ ಸೂತ್ರಧಾರಿ ನೀನೆ,
ಈ ಕೋಮಲೆ ನಿನ್ನವಳೆ—
ಅಂದ ಮಾತ್ರಕ್ಕೆ ನೀ ಎಲ್ಲಾ 'ಬಲ್ಲೆ' 'ಗೆದ್ದೆ' ಎಂದು
ಹಿಗ್ಗಿ ದಾಂಪತ್ಯ ತಿಳಿದೇ ಎನ್ನಬೇಡ.
ಜೀವನದ ದಾರಿಯುದ್ದಕ್ಕೂ ನಿನಗೆ
ನನ್ನವಳು ಮನಸ್ಸುಳ್ಳವಳು;
ನೋವು-ನಲಿವಿನ ಬೆಲೆ ಅರಿತವಳು
ಇತ್ಯಾದಿ ತಿಳಿದು ಅಗತ್ಯ ವಸ್ತುಗಳ ನೀ ತರದಿದ್ದರೂ
'ಪ್ರೀತಿ' ಕ್ಷೀಣಿಸುವಂತೆ ಮಾಡದೆ
ಪ್ರಾಮಾಣಿಕ ಸಂಗಾತಿಗನಾದರೆ
ಸ್ವರ್ಗಕ್ಕೆ ಕಿಚ್ಚಿನ್ನಲು ನನಗಿನ್ನೇನು ಬೇಕು ಗೆಳೆಯಾ ?



# ವಿಶ್ವ ಕಪ್ಪು ಸಾಹಿತ್ಯದ ಸೈದ್ಧಾಂತಿಕ ನೆಲೆಗಳು

○ ತೇಜಸ್ವಿ ಕಟ್ಟೀಮನಿ

ಜಗತ್ತಿನಲ್ಲಿ ಅತ್ಯಂತ ಅಪಮಾನಿತ ಜನಾಂಗಗಳಲ್ಲಿ ಒಂದಾದ ಕರಿಯರು; ತಮ್ಮ ಬಣ್ಣ ಹಾಗೂ ಆಕಾರದಿಂದ ನಾಚಿಕೊಳ್ಳುವುದು ಇಂದು ಇತಿಹಾಸದ ವಿಷಯ. 'ಕಪ್ಪು ಸುಂದರವಾಗಿದೆ' 'ಕರಿಯನಾದದ್ದಕ್ಕೆ ನಾನು ಹೆಮ್ಮೆ ಪಡುತ್ತೇನೆ' ನನಗೆ ಜನ್ಮಕೊಟ್ಟ ಕರಿಮಾತೆಯೇ ನಿನಗೆ ಧನ್ಯವಾದಗಳು. ಎಂಬ ಮಾತುಗಳು ಇಂದು ಕಪ್ಪು ಜನಾಂಗ ದಲ್ಲಿ ಯಾವ ಉದ್ಗಾರವಿಲ್ಲದೆಯೇ ಕೇಳಿಬರುತ್ತವೆ. ದಟ್ಟಕಾಡು, ಹನ್ನೆರಡು ತಿಂಗ ಳೂ ತುಂಬಿ ಹರಿವ ಹೊಳೆ ಹಳ್ಳ, ಬಂಗಾರ, ವಜ್ರಗಳ ಅಸಂಖ್ಯಾ ಗಣಿಗಳನ್ನು ಹೊಂದಿ ರುವ ಈ ಕಡು ಬಡವರು ಶತಮಾನಗಳಿಂದ ಬಿಳಿಯರ ಶೋಷಣೆಯನ್ನು ಸಹಿಸಿ ಕೊಳ್ಳುತ್ತಾ ಬಂದಿದ್ದಾರೆ.

ಬಿಳಿತೊಗಲನ್ನೇ ಬಂಡವಾಳವನ್ನಾಗಿಸಿಕೊಂಡು ಆಫ್ರಿಕಾದಲ್ಲಿ, ಅಮೇರಿಕೆಯಲ್ಲಿ ದದ್ದುಳಿಯುತ್ತಿದ್ದ ಬಿಳಿಯರನ್ನು ಇಂದು ಕರಿಯರು ಅವರ ಬಿಳಿ ತೊಗಲಿಗಾಗಿ ಹೀಯಾಳಿಸುವ ಕಾಲ ಬಂದಿದೆ.

ಇತಿಹಾಸದ ಚಲನಶೀಲತೆಯೊಂದಿಗೆ ತಮ್ಮನ್ನು ತಾವು ಕಂಡುಕೊಂಡ ಕರಿಯರು ಮೊದಲಿನಿಂದಲೂ ತಮ್ಮ ಒಳಗುದಿಯನ್ನು ಅಕ್ಷರದ ಮೂಲಕ ಹೇಳುತ್ತಿದ್ದರು. ಮೊದಲನೆ ಮಹಾಯುದ್ಧದ ಸಂದರ್ಭದಲ್ಲಿ ಅವರ ಈ ಅಕ್ಷರ ಜ್ಞಾನ ಸಾಹಿತ್ಯಿಕ ಚಳು ವಳಿಯ ರೂಪವನ್ನು ತಳೆಯಿತು. ಈ ಚಳುವಳಿಯಲ್ಲಿ ಕಪ್ಪು ಮನುಷ್ಯ ಇಡೀ ಸಮಾ ಜದ ಒಂದು ಅಭಿನ್ನ ಅಂಗ. ೧೯೩೦ರ ಸುಮಾರಿಗೆ ಕಪ್ಪು ಬರಹಗಾರರು ಯುರೋ ಪಿನ ಇತರ ಭಾಷೆಗಳಲ್ಲಿ ಬರೆಯತೊಡಗಿದರು. ಯುರೋಪಿನ ಸಮೃದ್ಧ ಭಾಷೆಗಳಾದ ಇಂಗ್ಲೀಷ್ ಮತ್ತು ಫ್ರೆಂಚ್ ಭಾಷೆಗಳ ಮೂಲಕ ಕರಿಯ ಬರಹಗಾರರು ಬಿಳಿಯರ ಅಭೇಧ್ಯ ಕೋಟೆಗಳಿಗೆ ಲಗ್ಗೆಯಿಟ್ಟರು. ಶತಮಾನಗಳಿಂದ ಕತ್ತಲಖಂಡವೆಂದು ಅನ್ನಿಸಿ ಕೊಂಡು ಬಂದಿದ್ದ ಈ ನಾಡಿನ ಐಸಿರಿಯನ್ನು ಕಂಡು ಜಗತ್ತು ಬೆಚ್ಚಿತು. ಇಂಗ್ಲೀಷ್ ಹಾಗೂ ಫ್ರೆಂಚ್ ಸಾಹಿತ್ಯದಲ್ಲಿ ಕಾಲಕಾಲಕ್ಕೆ ಬಂದ ಚಳುವಳಿಗಳಾದ ಪ್ರತೀಕವಾದ, ಅಸ್ತಿತ್ವವಾದ, ಸಮಾಜವಾದ ಮುಂತಾದ ವಾದಗಳ ಉತ್ತಮಾಂಶಗಳನ್ನು ಕರಿಯ ಬರಹಗಾರರು ಈ ನಡುವೆ ಮೈಗೂಡಿಸಿಕೊಂಡರು.

ಎರಡನೇ ಮಹಾಯುದ್ಧದ ನಂತರ ಸಾಂಸ್ಕೃತಿಕ ಪುನರುಜ್ಜೀವನದ ಸಂದರ್ಭ

ದಲ್ಲಿ ಆಫ್ರಿಕಾದ ಕಪ್ಪುಸಾಹಿತಿಗಳಲ್ಲಿ ವಸಾಹತುಶಾಹಿ ವಿರೋಧಿ ಧೋರಣೆ ಪ್ರಬಲವಾಗಿ ಕಾಣಿಸಿಕೊಂಡಿತು. ಇದರಿಂದ ಕಪ್ಪಾದುದೆಲ್ಲ ವೈಭವೀಕರಿಸುವ, ಬಿಳಿಯದೆಲ್ಲವನ್ನೂ ಏಕಾಏಕಿ ತಿರಸ್ಕರಿಸುವ ಸ್ವಭಾವ ಕಾಣಿಸಿಕೊಂಡಿತು. ಇದೊಂದು ಬಗೆಯ ಸ್ವಯಂ ಜನಾಂಗವಾದ, ಆಧುನಿಕ ಆಫ್ರಿಕನ್ ಸಾಹಿತ್ಯದಲ್ಲಿ ಪ್ರಭಾವ ಬೀರುವ ವಿಷಯವೆಂದರೆ–ಇತಿಹಾಸ. ಇಂದು ಕಪ್ಪುಬರಹಗಾರರು ಪ್ರೇರಣೆಗಾಗಿ ತಮ್ಮ ಅಖಂಡ ಪರಂಪರೆಯ ಕಡೆಗೆ ಕಣ್ಣು ಹಾಯಿಸುತ್ತಿದ್ದಾರೆ. ಇಂದಿನ ಜನಪ್ರಿಯ ಕವಿ, ನಾಟಕಕಾರ 'ವೋಲೆ ಸೋಯಿಂಕಾ' ಸಾಹಿತ್ಯದ ಮುಖ್ಯ ನೆಲೆಗಳೆಂದು ಗುರುತಿಸುತ್ತಾನೆ. 'ಕಪ್ಪು ಇತಿಹಾಸ, ಸಮಕಾಲೀನ ಯಥಾರ್ಥತೆ ಮತ್ತು ದೂರದೃಷ್ಟಿ' ಕಪ್ಪು ಜಗತ್ತಿನ ದಟ್ಟ ಅನುಭವ; ಅದು ಇಂದಿನದೇ ಆಗಿರಲಿ ಅಥವಾ ಹಿಂದಿನದೇ ಆಗಿರಲಿ, ಇಂದಿನ ಕಪ್ಪುಸಾಹಿತ್ಯದ ಮುಖ್ಯ ಗ್ರಾಸವಾಗಿದೆ. ಇದರಿಂದ ಕಪ್ಪುಸಾಹಿತಿಗಳಲ್ಲಿ ಸ್ವಯಂ ಜಾಗೃತಿ ಅತ್ಯಂತ ಎಚ್ಚರಾವಸ್ಥೆಯಲ್ಲಿ ಕೆಲಸ ಮಾಡುತ್ತಿದೆ. ಆಫ್ರಿಕನ್ನರಿಗೆ ಉಂಟಾಗಿರುವ ಎಲ್ಲ ಬಗೆಯ ಎಚ್ಚರಿಕೆ, ಅವರ ಪರಂಪರೆಯ ಅರಿವು ಕೂಡ ಪ್ರಬಲ ಕಾರಣಗಳಲ್ಲಿ ಒಂದಾಗಿದೆ. ಯೂರೋಪು ಮತ್ತು ಉತ್ತರ ಅಮೇರಿಕೆಗಳ ಸಂಸ್ಕೃತಿಗಳ ನಡುವೆ ಈ ಕಪ್ಪುಸಾಹಿತಿಗಳು ತಮ್ಮ ಸೃಜನಶೀಲತೆಯ ವಿಶಿಷ್ಟತೆಯನ್ನು ಗುರುತಿಸಿಕೊಳ್ಳಲು ಚಾರಿತ್ರಿಕವಾದವು ನೆರವಾಯಿತು. ಆಫ್ರಿಕನ್ ರಾಷ್ಟ್ರೀಯತೆಯ ಬೆಳವಣಿಗೆಯ ಘಟ್ಟದಲ್ಲಿಯೂ ಚರಿತ್ರೆಯ ಈ ಅರಿವು ಕರಿಯರಿಗೆ ಅನುವಾಯಿತು.

ಇಂದು ಆಫ್ರಿಕನ್ನರು ತಮ್ಮ ತಾಯ್ನುಡಿ ಹಾಗೂ ಇಂಗ್ಲಿಷ್, ಫ್ರೆಂಚ್‌ಗಳಲ್ಲಿ ಬರೆಯುವುದರ ಜೊತೆಗೆ, ಶತಮಾನಗಳಿಂದ ಅಮೇರಿಕೆಯಲ್ಲಿ ದುಡಿಯುತ್ತಾ ಆ ನೆಲದೊಂದಿಗೆ ಬೆಳೆದುಕೊಂಡಿರುವ ನಿಗ್ರೋಗಳು ಬರಾಟೆಯಿಂದ ಬರೆಯತೊಡಗಿದ್ದಾರೆ. ಇವರಲ್ಲಿ ವಿವಿಧ ಸಿದ್ಧಾಂತ, ರಾಜಕೀಯ ಪಕ್ಷಗಳಿಗೆ ಬದ್ಧರಾದ ಸಾಹಿತಿಗಳೂ ಇದ್ದಾರೆ. ಜೊತೆಗೆ ಯಾವುದೇ ಸಿದ್ಧಾಂತಕ್ಕೆ ಬದ್ಧರಾಗದೇ ತಮ್ಮ ಅನುಭವ ಹಾಗೂ ದೇಶಕ್ಕೆ ಹೊಂದಿಕೊಂಡು ಬರೆಯುವವರೂ ಇದ್ದಾರೆ. ವಿವಿಧ ದೇಶಗಳಲ್ಲಿ ನೆಲೆಸುತ್ತಾ, ವಿವಿಧ ಭಾಷೆಗಳಲ್ಲಿ ಬರೆಯುತ್ತಿರುವ ಈ ಕರಿಯರ ಸಾಹಿತ್ಯದಲ್ಲಿರುವ ಒಂದು ಸಮಾನ ಅಂಶವೆಂದರೆ ತಾಯ್ನಾಡಿನ ಅದಮ್ಯ ಹಂಬಲ. ಅಮೇರಿಕೆಯಲ್ಲಿರುವ ಬಹುತೇಕ ಕರಿಯ ಬರಹಗಾರರು, "ತಾಯ್ನಾಡಿಗೆ ಮರಳಿ" ಎಂಬ ಘೋಷಣೆಯನ್ನು ಪ್ರೀತಿಸುತ್ತಾರೆ. ಜೀವನೋಪಾಯಕ್ಕಾಗಿ ಶಹರದಲ್ಲಿರುವ ಕವಿ 'ಅದಾಲಿ ಮೋರ್ಟಿ' ಕಾವ್ಯದಲ್ಲಿ ತನ್ನ ಹಳ್ಳಿಯ ದಟ್ಟ ಚಿತ್ರಣವನ್ನು ಕೊಡುತ್ತ—

'ತಾಯ್ನಾಡಿಗೆ ಮರಳು ಅಣ್ಣಾ,
ಅಲ್ಲಿ,
ಹೆಮ್ಮರಗಳ ಮರ್ಮರದಲ್ಲಿ
ಹಕ್ಕಿಗಳ ಇಂಚರದಲ್ಲಿ
ನೀನು

ತಾತ ಮುತ್ತಾತಂದಿರ
ಸುಳುಹನ್ನು ಕಾಣುವೆ'

ಎಂದು ತನ್ನ ತಾಯ್ನಾಡಿನ ಸಿರಿಯನ್ನು ಕೊಂಡಾಡಿದರೆ, 'ಅಲ್ಬರ್ಟ್ ಕೇಪರ್ ಮನ್ಸ್ಕಿ'ನಿಗೆ ಕವಿತೆಯೆಂದರೆ ಸಾಕು 'ಆಫ್ರಿಕತನ' ತನ್ನ ಎಲ್ಲ ಹೊಗರುಗಳೊಡನೆ ಕುಣಿಯತೊಡಗುತ್ತದೆ.

ಪ್ರಾಚೀನತೆಯ ವೈಭವೀಕರಣದೊಂದಿಗೆ, ನಾಡಿನ ಆಚರಣೆ, ಹಬ್ಬಗಳು, ಅಲ್ಲದೆ ನಿತ್ಯ ಬದುಕಿನ ನೂರೆಂಟು ತಾಪತ್ರಯಗಳನ್ನು ಮೀರಿಯೂ ಸಾಗಿರುವ ವಿಮೋಚನಾ ಹೋರಾಟದ ಗಟ್ಟಿದನಿ ಇಂದಿನ ಕಪ್ಪು ಬರಹದ ಮೂಲ ದ್ರವ್ಯವಾಗಿದೆ. ಶತಮಾನ ಗಳಿಂದ ತಮ್ಮನ್ನು ಶೋಷಿಸುತ್ತಿರುವ ಬಿಳಿಯ ಸಂಸ್ಕೃತಿಯ ಪರಮದ್ವೇಷದೊಂದಿಗೆ ಈ ಬಿಳಿಯರ ಸಹವಾಸದಿಂದ ಬಾಂಧವರನ್ನೇ ಶೋಷಿಸುತ್ತಿರುವ ಕೆಲವು ಕರಿಯ ಬಂಡ ವಲಾಗಾರರ ಖಂಡನೆ ಕಪ್ಪು ಸಾಹಿತ್ಯದ ಮುಖ್ಯ ದನಿಗಳಾಗಿವೆ.

ಪಾನ್–ಆಫ್ರಿಕಾನಿಜಂದಂತಹ ಚಳುವಳಿಗಳು ಕಪ್ಪುಸಾಹಿತ್ಯಕ್ಕೆ ವಿಶ್ವದಾದ್ಯಂತ ಮನ್ನಣೆ ತಂದು ಕೊಟ್ಟರೂ, ಸ್ವಾತಂತ್ರ್ಯತೆಯ ಎಲ್ಲ ಸಾಧ್ಯತೆಗಳನ್ನು ಉಣಬಯಸುವ ಕರಿಯ ಬರಹಗಾರರು ಅಸಹನೆಯ ಆಗರಗಳಾಗಿದ್ದಾರೆ.

ಕರಿಯರ ಬದುಕಿನ ಅಭಿನ್ನ ಅಂಗಗಳಾದ ಡಮರು, ಗೀತ, ನರ್ತನಗಳು ಅವರ ಸೌಂದರ್ಯ ಪ್ರಜ್ಞೆಯನ್ನು ಉತ್ಕಟಗೊಳಿಸುವ ಜೊತೆಗೆ ಇತಿಹಾಸದ ಹೊಗರನ್ನು ಸುಳಿಸುತ್ತವೆ. ಇಂದು ಕಪ್ಪು ಕಾವ್ಯ ಹೊರಗಿನ ಎಲ್ಲಾ ಆಡಂಬರಗಳನ್ನು ಕಳಚಿ ಕೊಂಡು ಮತ್ತೆ ಸಾಂಪ್ರದಾಯಿಕ ಉಡಿಗೆಯಾದ ಜಾನಪದವನ್ನು ತೊಡುತ್ತಿದೆ. 'ಡೆನ್ನಿಸ್ ಬ್ರೂಟಸ್'ನ ಕಾವ್ಯದಲ್ಲಿ ನಾವು ಈ ಗುಣವನ್ನು ಕಾಣುತ್ತೇವೆ.

ಕಪ್ಪು ಸಾಹಿತ್ಯದ ಮೂಲ ಸೆಲೆಯಿರುವುದು ಆ ಜನತೆಯ ಅಸಹನೆಯಲ್ಲಿ. ತಾಯ್ನಾಡಲ್ಲಿ ಇದ್ದೂ ಪರಕೀಯರಂತೆ ಬದುಕಬೇಕಾಗಿ ಬಂದಿರುವ ದುರ್ಭರ ಪ್ರಸಂಗ ದಲ್ಲಿ. ಆದ್ದರಿಂದಲೇ ಪೆನ್ನಿನ ಜೊತೆಗೆ ಬಂದೂಕನ್ನು ಕೂಡಾ ಬಳಸುವುದರಲ್ಲಿ ಕರಿಯ ಬರಹಗಾರರು ಹಿಂದೆ ಬಿದ್ದಿಲ್ಲ. ಅಂಗೋಲದ 'ಅಗೊಸ್ಟಿನೊ ನೆಟೋ' ಮೂರೂ ವರೆ ಶತಮಾನಗಳಿಂದ ಬೇರೂರಿದ್ದ ಪೋರ್ಚುಗೀಸರನ್ನು ಓಡಿಸಲು ಹೋರಾಡಿ ಸಫಲ ನಾದ. ಆ ಗೆಲುವಿನ ಯಾತ್ರೆಯ ಯಾತನೆಯನ್ನು ಕಥೆಗಳ ಮೂಲಕ ಹಂಚಿಕೊಳ್ಳಲು ಯತ್ನಿಸಿದ. ಬಹಳಷ್ಟು ಕರಿಯ ಬರಹಗಾರರಲ್ಲಿ ದೇಶಕ್ಕಾಗಿ, ತಮ್ಮ ರಾಜಕೀಯ ನಿಲುವಿಗಾಗಿ ವರ್ಷಾನುಗಟ್ಟಲೆ ಜೇಲು ಅನುಭವಿಸಿದವರಿದ್ದಾರೆ. ನೈಜೀರಿಯಾದ ಕವಿ, ನಾಟಕಕಾರ ವೋಲೆ ಸೋಯಿಂಕ್, ಕೊಫಿ ಅವೂನರ್, ಡೆನ್ನಿಸ್ ಬ್ರೂಟಸ್, ಅಂತೋನಿಯೋ ಜೆಸಿಂತೋ ಮುಂತಾದವರ ಕವಿತೆ, ನಾಟಕಗಳಲ್ಲಿ ಜೇಲಿನ ಕರಾಳ ಛಾಯೆಯನ್ನು ನಾವು ಕಾಣುತ್ತೇವೆ. "ಮರುಶೋಧನೆ" "ನನ್ನ ರಕ್ತದ ರಾತ್ರಿಗಳು" ಮುಂತಾದ ಸಂಕಲನಗಳ ಮೂಲಕ ತೀವ್ರಗಾಮೀ ಕವಿಯೆಂದು ಕರೆಯಲ್ಪಡುವ 'ಕೊಫಿ ಅವೂನರ್'ನ ಕಾವ್ಯದಲ್ಲಿ ತನ್ನ ದೇಶದ ಜನ–ಗನ್ನು ರೋಗ, ರುಜಿನುಗಳಿಂದ ನಿತ್ಯವೂ

ಸಾಯುವುದನ್ನು ತದ್ರೂಪ ಚಿತ್ರಿಸುವುದಲ್ಲದೆ; ಕರಿಯ, ಶಾಂತ ಸ್ವಾಭಾವದ ಆಫ್ರಿಕಾದವ ಒಂದುದಿನಸೆಟೆದುನಿಲ್ಲದೇ ಬಿಡನು ಎಂಬ ಎಚ್ಚರಿಕೆಯನ್ನು ಕೊಡುತ್ತಾನೆ.

ನೈಜೀರೀಯಾದ ಕವಿ, ಕತೆಗಾರ ಜೆ. ಪಿ. ಕ್ಲಾರ್ಕ್‌ನ ಸಾಹಿತ್ಯವಲ್ಲಿ ಚಾರಿತ್ರಿಕ ಅಸಹನೆ ಎದ್ದು ಕಾಣುತ್ತದೆ. ತನ್ನ ಇತ್ತೀಚಿನ ಕವನಸಂಕಲನ 'ಕ್ಯಾಜು ಅಲ್ಟೀಸ್' ದಲ್ಲಿ–

'ಬರೀ ಸಾವಲ್ಲ, ದುರ್ಘಟನೆಯಲ್ಲ
ಕೋಟಿಗಟ್ಟಳೇ ಕರಿಯರು
ಹೊಗೆಗೂಡುಗಳಲ್ಲಿ, ನಗಾರಿಯಂತೆ
ಹೊಡೆದುಕೊಳ್ಳುತ್ತಿರುವ ಎದೆ ಹಿಡಿದುಕೊಂಡು
ತುರ್ತು ಚಿಕಿತ್ಸೆಗಾಗಿ ಕಾದಿದ್ದಾರೆ'

ಎಂದು ತನ್ನ ನಾಡಿನ ತುರ್ತು ರಿಪೇರಿಯ ಅವಶ್ಯಕತೆಯ ಮೂನ್ಸೂಚನೆ ಕೊಡುತ್ತಾನೆ. ನೈಜೀರಿಯಾದಲ್ಲಿ ಇದ್ದೂ ಸತ್ತಂತಿರುವ, ಮಾತನಾಡುತ್ತಿದ್ದೂ ಮೂಕರಂತಿರುವ ತನ್ನ ಜನರ ಷಂಡತನವನ್ನು ಕ್ಲಾರ್ಕ್ ಅಸಹನೆಯಿಂದ ಹೊರಗೆಡವಿದ್ದಾರೆ.

ಅಮೇರಿಕೆಯ ಕಪ್ಪು ಕಾದಂಬರಿಕಾರ 'ರಿಚರ್ಡ್‌ರೈಟ್'ರ ಕಾದಂಬರಿಗಳಲ್ಲಿ (ಅಂಕಲ್ ಪಾಂನ ಮಗು, ಇದ್ದೂರ ಮಗ, ಕಪ್ಪು ಹುಡುಗ) ಗುಲಾಮತನದ ಮರುಕಳಿಕೆ, ಪ್ರತಿಭಟನೆ ಹಾಗೂ ಬಿಳಿ ಮೌಲ್ಯಗಳ ಯಜಮಾನಿಕೆಯುಳ್ಳ ನಾಡಿನಲ್ಲಿ ಪ್ರತಿಷ್ಠೆ ಗೌರವಗಳ ಹುಡುಕಾಟವನ್ನು ನಾವು ಕಾಣುತ್ತೇವೆ. ಅಮೇರಿಕೆಯ ಕಪ್ಪು ಕವಿತೆಗಳಲ್ಲಿ ಹೋರಾಟದ ಅಸ್ತ್ರವಾಗಿ ಕಾವ್ಯವನ್ನು ಬಳಸುತ್ತಿರುವುದ ಗಮನಾರ್ಹ. ಒಮ್ಮೊಮ್ಮೆ ಆ ಕಾವ್ಯ ಕೇವಲ 'ಹ್ಯಾಂಡ ಬಿಲ್ಲ' ಆದರೂ ಚಿಂತೆಯಿಲ್ಲ, ಹೇಳಬೇಕಾದದ್ದನ್ನು ಯಾರ ಮುಲಾಜಿಲ್ಲದೆ ಹೇಳುವುದು ಈ ಕಾವ್ಯದ ಮುಖ್ಯ ಗುಣ.

ಕಪ್ಪು ನಾಟಕಗಳಲ್ಲಿ ಕವಿತೆಯಲ್ಲಿಯಂತೆ ಆಫ್ರಿಕಾದ ಪುರಾಣ, ದಂತ ಕಥೆ, ಜಾನಪದ ಹಾಡು ಹೀಗೆ ಜನಪದದ ಎಲ್ಲ ಸಡಗರಗಳನ್ನು ಬಳಸಿಕೊಂಡು; ಅಂದಿನ ಸಂಕೇತ, ಪ್ರತಿಮೆಗಳನ್ನು ಇಂದಿಗೆ ಕುಗ್ಗಿಸಿ ಅಥವಾ ಹಿಗ್ಗಿಸಿಕೊಂಡು, ಆಧುನಿಕ ಬದುಕಿನ ಎಲ್ಲಾ ಮಗ್ಗಲುಗಳನ್ನು ಅಭಿವ್ಯಕ್ತಿಸುವ ಗುದಮುರಿಗೆ ಸ್ಪಷ್ಟವಾಗಿ ಕಾಣುತ್ತದೆ. ಜೇಮ್ಸ್ ಬಾಲ್ಡ್ವಿನ್, ಇ. ಟಿ. ಬಲ್ಲಿನ್ಸ್ ಇಂಥ ನಾಟಕಕಾರರಲ್ಲಿ ಪ್ರಮುಖರು.

ಕಪ್ಪು ಕಾದಂಬರಿ ಕ್ಷೇತ್ರ ಎಲ್ಲವುಗಳಿಗಿಂತ ಹುಲುಸಾಗಿ ಬೆಳೆದಿದೆ. 'ಚಿನುವಾ ಅಚುಬೆ' ಕಪ್ಪು ಕಾದಂಬರಿಯಲ್ಲಿ ಒಂದು ದೊಡ್ಡ ಹೆಸರು. ಅವರ ಪ್ರಖ್ಯಾತ 'ಥಿಂಗ್ಸ್ ಫಾಲ್ ಅಪಾರ್ಟ್' ಕಾದಂಬರಿಯಿಂದ ಇತ್ತೀಚಿನ 'ಎ ಮ್ಯಾನ್ ಆಫ್ ದಿ ಪೀಪಲ್' ವರೆಗಿನ ಕಾದಂಬರಿಗಳನ್ನು ನೋಡಿದರೆ ಈ ಎಲ್ಲಾ ಕಾದಂಬರಿಗಳ ನಡುವೆ ಆಫ್ರಿಕತನದ ಒಂದು ಕೊಂಡಿ ಕಂಡು ಬರುತ್ತದೆ. ಅಚುಬೆ ಕಾವ್ಯ ಹಾಗೂ ಕಾದಂಬರಿಯನ್ನು ಒಂದು ಸಾಮಾಜಿಕ ಹೊಣೆಯೆಂದು ತಿಳಿದು ಬರೆವ ಗಂಭೀರ ಬರಹಗಾರ. ಸಾಹಿತ್ಯ ವಿರುವುದು ಬದುಕಿಗಾಗಿ ಅದೂ ಮಾನವನ ಉಪಯೋಗಕ್ಕಾಗಿ ಎಂದು ಬಲವಾಗಿ ನಂಬಿ,

ತನ್ನ ಪ್ರತಿಯೊಂದು ಕೃತಿಯ ಮೂಲಕವು ಮಾನವ ಉಪಯುಕ್ತತೆಯನ್ನು ಅಚುಬೆ ಹುಡುಕುತ್ತಾರೆ. ಈ ಮಾನವ ಉಪಯುಕ್ತತೆಯ ಹುಡುಕಾಟದಿಂದ ಕಲೆಗೆ ಧಕ್ಕೆಯಾದರೂ ಸರಿ ನನಗೆ ಅದರ ಭಯವಿಲ್ಲ ಎಂದು ಅಚುಬೆ ಹೇಳುತ್ತಾರೆ. 'ಕಲೆಗಾಗಿ ಕಲೆ' ಅನ್ನುವ ಘೋಷಣೆ, ನಾಯಿಗೆ ಬಿಳಿಯರು ಒಗೆಯುವ ಇನ್ನೊಂದು ಆಕರ್ಷಣೀಯ ಬಿಸ್ಕೀಟೆಂದು 'ಅಚುಬೆ' ಅದನ್ನು ಗೇಲಿ ಮಾಡುತ್ತಾರೆ.

ಘಾನಾದ 'ಅಮಾ ಅತಾ ಐಡೂ' ಎಂಬ ಕಥೆಗಾರ್ತಿ, 'ಪೀಟರ್ ಅಬ್ರಹಾಂ' ಎಂಬ ದಕ್ಷಿಣ ಆಫ್ರಿಕೆಯ ಕಾದಂಬರಿಕಾರ, ನೈಜೀರಿಯಾದ ಟಿ. ಎಂ. ಅಲೋಕೋ, 'ಗಬ್ರಿಯಲ್ ಒಕಾರಾ', 'ವಿಲಚಿ ಅಮಾದಿ'. ಸೆನೆಗಲದ 'ಡೇವಿಡ್ ದಿಯೋಪ' ಕೆನ್ಯಾದ 'ಜೇಮ್ಸ್‌ನೂಗಿ' 'ರಿಚರ್ಡ್ ಲೀವೆ', 'ಆರ್ಥರ್ ಮೈಮಾನೆ' ಮುಂತಾದವರ ಕಥೆ ಕಾದಂಬರಿಗಳಲ್ಲಿ ನಾವು 'ಚಿನುವಾ ಅಚುಬೆ' ಅವರ ಬದುಕಿನ ಬಗೆಗಿನ ಒಲವನ್ನೇ ಕಾಣುತ್ತೇವೆ.

ನಶಿಸುತ್ತಿರುವ ತಮ್ಮ ಮಾನವ ಶಕ್ತಿ, ಕುಂದುತ್ತಿರುವ ದೇಶದ-ಸಂಪತ್ತು, ದಿನದಿಂದ ದಿನಕ್ಕೆ ಭಯಾನಕಗೊಳ್ಳುತ್ತಿರುವ ಬಿಳಿಯರ ದಬ್ಬಾಳಿಕೆ, ಬಲಾಢ್ಯ ಬಣಗಳ ಶಸ್ತ್ರಾಸ್ತ್ರ ಪೈಪೋಟಿ, ಪರದೇಶಿತನ, ಸ್ವಬಾಂಧವರ ಅನಕ್ಷರತೆ, ಅಜ್ಞಾನಗಳಿಂದ ಉದ್ಭೂತ ಅಸಹಾಯಕತೆಗಳು ಇಂದಿನ ಕಪ್ಪು ಸಾಹಿತ್ಯದ ಸಮಸ್ಯೆಗಳಾಗಿವೆ.

ಈ ಎಲ್ಲಾ ಕ್ಷೇತ್ರಗಳೊಡನೆ ಕರಿಯ ಬರಹಗಾರ ಯಾವ ರೀತಿಯ ಕೊಡುಕೊಳ್ಳಿ ಇಟ್ಟುಕೊಂಡಿದ್ದಾನೆ ಎನ್ನುವುದರ ಮೇಲೆ ಅವನ ಬರಹವನ್ನು ಪರಿಶೀಲಿಸಿದರೆ ನಿಜಕ್ಕೂ ಕಪ್ಪು ಸಾಹಿತ್ಯ ಸಮೃದ್ಧವೆನಿಸುತ್ತದೆ. ಯಾಕೆಂದರೆ ಹೆಜ್ಜೆಗೊಂದು ವಾದಗಳಿದ್ದೂ, ಆಕರ್ಷಕ ಘೋಷಣೆಗಳಿದ್ದೂ ಕಪ್ಪು ಬರಹಗಾರರನ್ನು ಸೆಳೆದುಕೊಳ್ಳಲು ಅವು ಅಸಮರ್ಥವಾಗಿವೆ. ಕಪ್ಪು ಬರಹಗಾರ ತನ್ನ ನಾಡಿನ, ಜನರ ಹಾಗೂ ತನ್ನ ವೈಯಕ್ತಿಕ ಸಮಸ್ಯೆಗಳನ್ನು ಒಬ್ಬ ಕರಿಯನಾಗಿಯೇ ನಿಂತು ಬಗೆಹರಿಸಲು ಪ್ರಯತ್ನಿಸುತ್ತಾನೆಯೆ ಹೊರತು, ಯಾವ ಎರವಲು ಉಪಾಯವನ್ನು ಅವನು ಸ್ವೀಕರಿಸುವುದಿಲ್ಲ. ತನಗೆ ಒಳ್ಳೆಯದಾಗುವ ಎಲ್ಲ ಒಳ್ಳೆಯದನ್ನೂ ಸ್ವೀಕರಿಸುತ್ತ ಆದರೆ ಅದನ್ನು 'ಆಫ್ರಿಕಗೊಳಿಸುತ್ತ' ತನ್ನದೇ ಆದ ಸೈದ್ಧಾಂತಿಕ ನೆಲೆಯನ್ನು ಕಪ್ಪು ಲೇಖಕರು ಸ್ಥಾಪಿಸಿಕೊಂಡಿದ್ದಾರೆ. ಗುಲಾಮತನ, ಶೋಷಣೆ, ವಸಾಹತುಶಾಹಿಶಕ್ತಿ, ಜೀವ ವಿರೋಧಿ ಕೃತ್ಯಗಳ ವಿರುದ್ಧ ಸಿಡಿದೇಳುವ ಕಪ್ಪು ಬರಹಗಾರ, ಹೆಮ್ಮರಗಳ ಮರ್ಮರಕ್ಕೆ, ಹಕ್ಕಿಗಳ ಉಲಿತಕ್ಕೆ ಮಂತ್ರ ಮುಗ್ಧನಾಗಿ, ಮಗುವಿನಂತೆ 'ಆಫ್ರಿಕನ್ ಮಾತೆ'ಯನ್ನು ಆರಾಧಿಸುತ್ತಾನೆ. ಪರನಾಡಿನಲ್ಲಿರುವ ಆಫ್ರಿಕನ್‌ನು 'ಕಪ್ಪು ಮಾತೆ'ಯ ನೆನಪಾಗಿ ಕಂಪಿಸುತ್ತಾನೆ. ವರ್ಗ ಸಂಘರ್ಷವನ್ನು ಕುರಿತು ಚಿಂತಿಸಿದರೂ, ಪ್ರೀತಿಯನ್ನು ಮೆಲುಕು ಹಾಕಿದರೂ ಕಪ್ಪುಬರಹಗಾರ ತನ್ನ ನಾಡಿನ ಎಲ್ಲ ದುರಂತ ಮತ್ತು ಖದರನ್ನು ಕುರಿತೇ ಚಿಂತಿಸುವುದು ಕೇವಲ ಅವನದೇ ಆದ, ಬದುಕನ್ನು ಕುರಿತು ಗ್ರಹಿಸುವ ಬಗೆಯಾಗಿದೆ.

# ಪಂಜಾಬು

○ ಎಚ್. ಎಸ್. ಶಿವಪ್ರಕಾಶ್

ಪಂಜಾಬಿನ ಹಸಿರು ಕ್ರಾಂತಿ
ಇನ್ನೂ ಹಸಿರು.

ಪಂಜಾಬಿನಲ್ಲಿ ಹರಿಯುತ್ತಿರೋ ರಕ್ತ ರಕ್ತ ಅಲ್ಲ
ನಮ್ಮ ನಾಡಿನ ಉಸಿರು.
ಹಸಿರು ಕೆಂಪಿನ ಮಧ್ಯೆ
ಬೆಳ್ಳಗಾಗಿದೆ ಸಿಕ್ಕರ ದಾಡಿ
ಏನು ಮಾಡುತ್ತಿದೆ ಅಶೋಕ ಚಕ್ರ
ದೆಹಲಿಯಲ್ಲಿ ?

ಹೊನ್ನ ದೇಗುಲದಲ್ಲಿ ನಾನಕರ ಗುಂಡಿಗೆಯಲ್ಲಿ
ಗುಂಡುಗಳು, ಬಂದೂಕು, ಬಾಂಬು
ತಂದವರು ಯಾರು ?
ಪಂಜಾಬಿನ ಪಂಚನದಿಗಳ
ಕಲರವ,
ಪಂಜಾಬಿನ ಹಸುಗಳ ಕೆಚ್ಚಲಿನ
ಕರೆಯದ ಹಾಲು
ಕೇಳುತ್ತಿವೆ

ಜಲಿಯನ್ ವಾಲಾಬಾಗ್‌ನ ಪ್ರೇತಗಳ
ಸಭೆಯಲ್ಲೂ ಇದೇ ಚರ್ಚೆ.
ಉತ್ತರ ಕೊಡಿ
ಕಾವೇರಿ, ಕಪಿಲೆ, ಗಂಗೆ, ಜಮುನಾ ಮಹಾನದಿ
ನಾಡ ಲಾಡಿಗೆ ಕೈಯಿ ಬಿದ್ದಾಗ
ಕಾದಿದ ಕೈಯಿಗಳೇ ಕೈಯಿ ಯಾಕೆ ಹಾಕಿವೆ
ನಾಡ ಕುತ್ತಿಗೆಗೆ ?

ಫಸಲು ತೆಗೆಯೋ ಕೈಯಿ
ಹಾಲು ಕರೆಯೋ ಕೈಯಿ
ಯಾಕೆ ಹಿಡಿದಿವೆ ಕೈಬಾಂಬು,
ಬಂದೂಕು, ಕಿರ್ಪಾಣ್ ?

ಹೊನ್ನ ದೇಗುಲದಲ್ಲಿ ಪಾರಿವಾಳದ ಬದಲು
ರಣಹದ್ದು, ಡೇಗೆಗಳು.
ಕಾವೇರಿ, ಕಪಿಲೆ, ಗಂಗೆ, ಜಮುನಾ, ಮಹಾನದಿ
ಬೆರೆಸಿರಿ ನಿಮ್ಮ ನೀರನ್ನು
ನಾನಕರ ಪ್ರೇಮದ ಪಂಚ ನದಿಗಳಿಗೆ,

ಕಾವೇರಿ, ಕಪಿಲೆ, ಗಂಗೆ, ಯಮುನೆಗೆ, ಮಹಾನದಿ
ನೀವೂ ಸೇರಿರಿ.

ಏನು ಮಾಡುತ್ತಿದೆ ಅಶೋಕ ಚಕ್ರ ದೆಹಲಿಯಲ್ಲಿ.
ನದಿಗಳೇ ನಡೆಯಿರಿ
ಕಣ್ಣುಗಳೇ ಕರೆಯಿರಿ
ಪ್ರೀತಿ ಮುನ್ನೀರಾಗಿ ಪಂಜಾಬು ಸೇರಿರಿ.
ಪಾರಿವಾಳಗಳ ವಾರಿಧಿ ನೀವೂ
ಪೊರೆಯಿರಿ, ನೆರೆಯಿರಿ
ಅಳಿಸಿ, ಮಾಯಿಸಿ ಗಾಯದ ಕಲೆಯನ್ನು
ತೊರೆಸಿ, ಒರೆಸಿ, ಕೊಚ್ಚಿಬಿಡಿ
ರಕ್ತದ ಕಲೆ ಕಲೆಯನ್ನು
ಹಸಿರು ಹೊಲದಲ್ಲಿ ಮೊಳೆವ ದ್ವೇಷ ಕಳೆಯನ್ನು.

ನಾಡ ಬಲ ತೋಳಲ್ಲಿ ಬೆಳೆದ ಕೋವಿ
ಯಾರ ಕಡೆಗಣ್ಣು ಗುರಿ ?
ಗುರಿ ನಿನ್ನ ಕಡೆಗೆ, ಗುಂಡಿಗೆಗೆ
ನಾನಾ ಗುಂಡಿಗೆಗೆ, ನಾನಕರ ಗುಂಡಿಗೆಗೆ
ಕೋಳವಾಗಲಿ ಕೊಲೆಗೆ
ಕೋವಿ ಕೊಳಲುಗಳಾಗಲಿ
ಕೊಳಲು ಕೊರಳಾಗಿ ಸಿಕ್ಕಸಿಕ್ಕ ಸಿಖ್ಖ ಹಿಂದೂ ಮುಸಲ
ಹಸಿರನ್ನು ಆವರಿಸಿ, ನವಿಲು ಮುಚ್ಚುವ ಹಾಗೆ

ಹಾಡಿ ಪ್ರೇಮದ ಹಾಡು
ಗಗನವೇ ತಟ್ಟೆ ರವಿಚಂದ್ರ ದೀಪಕ
ತಾರಕಾ ಮಂಡಲ ಜ್ಯೋತಿ
ಸಕಲ ಬನಗಳ ಹೂವು.



## ಬಂಡಾಯಗಾರ್ತಿ ಕನಲಿದ್ದು

ಪ್ರೀತಿಸು:
ಶೋಷಣೆ ಮಾಡದೆ.
ಪ್ರೇಮಿಸು--
ಹೆಚ್ಚು ಗದ್ದಲವಿಲ್ಲದೆ.
ಅಪ್ಪು; ಬೇಕಾದರೆ ಬಿಗಿದಪ್ಪು
ಮೈಗೆ ನೋವುಣಿಸದೆ
ಇಡು ಕಚಗುಳಿ; ಕೊಡು ಮುದ
ಹೆಚ್ಚಾಗಿ ಕೈ, ಮೈಗೆ ತಾಕಿಸದೆ.
ಕೊಡು ಮುತ್ತು, ಸೀರೆ ಸೆರಗಿಗೆ--
ಬೇಕಾದರೆ ಹೊಟ್ಟೆಗೆ.
ಮೊತ್ತವಾಗಿ ಇಷ್ಟು ಕೇಳು:
ನನಗೂ ಖುಷಿ ಕೊಡು; ಹಾಸಿಗೆಯಲಿ
ನೀ ನನ್ನ ತುಳಿಯದೆ
ನನ್ನ ಮೇಲೆ ನಿನ್ನ ಒರಟು ಭಾರ
'ಹಾಕದೆ'
ಏಕೆಂದರೆ....ಗೊತ್ತಾ ?
ನಾನು, ಸಿಡಿದೆದ್ದವಳು !

—ರಾ. ಮೂರ್ತಿ

# ನನ್ನ ಅಪ್ಪನ ಕುರಿತು

○ ಆರ್. ಜಿ. ಹಳ್ಳಿ ನಾಗರಾಜ್

ನನ್ನ ಅಪ್ಪ,
ಐವತ್ತರ ಗಡಿ ದಾಟಿದವ.
ಹೋರಾಟವೇ ಆತನ ಬದುಕಿನ ಉಸಿರು,
'ಹೇಗಿದ್ದಿ?' ಎಂದು ಕೇಳಿನೋಡಿ–
ಹೇಳುತ್ತಾನೆ: ನೆನಪಿನ ಗಂಟು ಬಿಡಿಸಿ ಮುಂದಿಡುತ್ತ
ನಿಟ್ಟುಸಿರು ಬಿಟ್ಟು ಆಯುಷ್ಯ ಕಡಿಮೆ ಮಾಡಿಕೊಳ್ಳುತ್ತಾನೆ.
ಈ ಐವತ್ತಕ್ಕೇ
ಕಿಬ್ಬರಿ ಮೂಳೆಯು ಶೋಧಿಸಿದರೂ
ಹಿಡಿ ಮಾಂಸವಿಲ್ಲದ
ಅಸ್ಥಿಪಂಜರ ಆಗಿರುವ ಇವನೊಂದು
ಮ್ಯೂಸಿಯಂನ ಪ್ರದರ್ಶನದ ಗೊಂಬೆ
ಕಣ್ಣಿಗೆ ಸೋಡಾ ಗ್ಲಾಸ್ ಹಾಕಿರುವ
ಕೈಲಿ ಕೋಲಿಡಿದು ಗೂನು ಬೆನ್ನಲ್ಲೇ ನಡೆವ
ಇವನು,
ಬಂದವರನ್ನು ಅಲ್ಲಾಡಿಸಿ ಬಿಡುತ್ತಾನೆ
ಕಿವಿ ನಿಮಿರಿಸಿ ಮಾತಿಗೆ ಎಳೆಯುತ್ತಾನೆ.
ಕಾಲದ ಗತಿಯಲ್ಲಿ ಎಲ್ಲವೂ.........
ಹೀಗೆ–
ಬಡ ಬಡಿಸುತ್ತಾನೆ.
'ಅಜ್ಜ, ಹೀಗೇಕೆ ಇದ್ದೀ ?' ಎಂದು ಪ್ರಶ್ನೆ ಕೇಳುತ್ತಾ ಹೋಗಿ
ಒಂದು ಮಾತು ನಿಮಗೆ ಹೇಳುತ್ತಾನೆ:
'ರಾತ್ರಿಯ ಊಟದ ಅಭ್ಯಾಸವೇ ಇಲ್ಲ !'

o o o o o

**ಹಿಂದೊಮ್ಮೆ ಬದುಕಿದ್ದ 'ಶಾಸ್ತ್ರಿ' ಎಂಬ ನಾಲ್ಕೂವರೆ ಅಡಿಯ ಮನುಷ್ಯನ ನೆನಪಾದರೆ ಒಳ್ಳೆಯದು.**

ಆದರೆ, ನನ್ನ ಅಪ್ಪ
ದೇಶಕ್ಕೆ ಅನ್ನ ಸಿಕ್ಕಲಿ
ಒಪ್ಪೊತ್ತಿನ ಕೂಳಿಗೆ ಗತಿಯಾಗಲಿ
ಇತ್ಯಾದಿ ಅನಿಸಿಕೆಗಳಿಂದ ರಾತ್ರಿ ಊಟ ಬಿಟ್ಟಿಲ್ಲ !
ಅವನ ಕಳೆದು ಹೋದ ದಿನಗಳು
ತನ್ನ ಈ ಸ್ಥಿತಿಗೆ ತಂದವರ ಕುರಿತು ಕುದಿಯುತ್ತಾನೆ
ಹಲ್ಲು ಕಡಿಯುತ್ತ ಸೂಳೆಮಕ್ಕಳು ಎಂದು ಶಪಿಸುತ್ತಾನೆ
ಮನಸ್ಸು ಕಲಕಿ ತಿಂದದ್ದು ಮೈಗೆ
ದಕ್ಕದ ಸ್ಥಿತಿಗೆ–ಹೀಗಾಗಿದ್ದಾನೆ.
ಚಿಂತೆ–ಒಂದು ಸಂತೆ.
ಬಳಲಿ ಬೆಂಡಾದ ಅಪ್ಪನಿಗೆ
ನಾನು ಕೊಡುವ ಉಡುಗೊರೆ ಏನು ಗೊತ್ತೆ ?
ಇಂಡಿಯಾದ ಕೋಟಿ ಕೋಟಿ ಲೆಕ್ಕದಲ್ಲಿ
ನನ್ನದೂ ಒಂದು ಕಾಣಿಕೆ :
ಕುಲದೀಪಕನ ಅರ್ಪಣೆ
ಈ ಕುಲದೀಪಕ ಅಜ್ಜನ ನಡೆಸುತ್ತಾ ಹಾಡುತ್ತಾನೆ :
'ಅಜ್ಜನ ಕೋಲಿದು ನನ್ನಯ ಕುದುರೆ..........'
ಐವತ್ತರ ನನ್ನಪ್ಪ ಹಾಗೆ ನಡೆಯುತ್ತಾನೆ–
ದಾರಿ ಸವೆಸುತ್ತಾ..........

## ವ್ಯರ್ಥ

ನನಗನ್ನಿಸುತ್ತದೆ :
ಪ್ರಖರತೆಯ ಜ್ಞಾನ ದೀಪವನ್ನು
ಕತ್ತಲೆಯ ಕೋಣೆಯೊಳಗಿಟ್ಟು
ಗಾಳಿ ಹರಿಯದಂತೆ ಬಾಗಿಲು ಮುಚ್ಚಿದರೆ
ಚಾಕುವಿಗೆ ತುಕ್ಕು ಹಿಡಿದಷ್ಟೇ ವ್ಯರ್ಥ.

—ಡಿ. ಹೊಸಳ್ಳಿ ಶಿವು

ಪರಿಚಯ :

# ವಿಚಾರವಾದಿ ಡಾ. ಅಬ್ರಾಹಂ ಕೋವೂರ್

○ ಪ್ರೊ॥ ಬಿ. ವಿ. ವೀರಭದ್ರಪ್ಪ

ಇಪ್ಪತ್ತನೇ ಶತಮಾನದಲ್ಲಿ ವಿವೇಕಾನಂದ, ಅರವಿಂದ ಮತ್ತು ಗಾಂಧೀಜಿ ಯಂತಹ ಮಹಾತ್ಮರು ಸಮಾಜದ ಕುಂದುಕೊರತೆಗಳನ್ನು ನಿವಾರಿಸಲು ತಮ್ಮ ಜೀವನವನ್ನು ಮೀಸಲಾಗಿಟ್ಟರು. ಭಾರತದೇಶದಲ್ಲಿ ಜನಿಸಿದ ಇಂಥ ಅನೇಕ ಮಹಾ ಪುರುಷರು ಯಾರೂ ಬರಿಗೈಯಿಂದ ಬೂದಿ, ಶಿವಲಿಂಗ ಅಥವಾ ಕೈಗಡಿಯಾರ ವನ್ನು ಬರಿಸಲಿಲ್ಲ. ಇವರೆಲ್ಲಾ ಮಾನವರ ಒಳಿತಿಗಾಗಿ ದುಡಿದವರು. ಪೆಟ್ರೋಲು ಇಲ್ಲದೆ ಕಾರು ನಡೆಸಲಿಲ್ಲ; ಹರಿಯುವ ನದಿಯನ್ನು ಹೋಳುಮಾಡಿ ಕಾರಿನಲ್ಲಿ ಆಚೆ ದಡವನ್ನು ಸೇರಲಿಲ್ಲ. ಅವರು ಯಾರೂ ಪವಾಡಪುರುಷರಲ್ಲ.

ಇತ್ತೀಚೆಗೆ ನಮ್ಮ ದೇಶದಲ್ಲಿ ಕೆಲವು ಅವತಾರ ಪುರುಷರೆಂದು ಕರೆಸಿಕೊಳ್ಳುವ ವರು ಮೇಲೆ ಹೇಳಿದ ಪವಾಡಗಳನ್ನು ಮಾಡುತ್ತಿದ್ದಾರೆಂದು ಆಗಾಗ ಪತ್ರಿಕೆಗಳಲ್ಲಿ ಸುದ್ದಿಗಳು ಹಬ್ಬುತ್ತವೆ. ಕಪಟವರಿಯದ ಅನೇಕರು ಅವನ್ನು ನಿಜವೆಂದೇ ನಂಬುತ್ತಾರೆ.

ಪ್ರಾಮಾಣಿಕ ಜನ ಪ್ರಾಮಾಣಿಕ ದುಡಿಮೆಯಿಂದ ಬದುಕುತ್ತಾರೆ. ಅಪ್ರಾಮಾಣಿಕ ಜನ ದುಡಿದು ಬದುಕುವ ಜನರನ್ನು ವಂಚಿಸಿ ಬದುಕುತ್ತಾರೆ. ನಮ್ಮ ದೇಶದಲ್ಲಿ ಕೈಚಳಕ ಮತ್ತು ಗಾರುಡಿ ವಿದ್ಯೆಗಳನ್ನು ಬಲ್ಲ ಯಾರು ಬೇಕಾದರೂ ಸುಲಭವಾಗಿ ದೇವರ ಅವ ತಾರವಾಗಬಹುದು. ಅವರನ್ನು ಕುರಿತು ಅನೇಕ ಕಾಗಕ್ಕ–ಗುಬ್ಬಕ್ಕನ ಕಥೆಗಳು ಹರ ಡುತ್ತವೆ. ಅವರ ಪವಾಡ ಶಕ್ತಿ, ತ್ರಿಕಾಲ ಜ್ಞಾನಗಳನ್ನು ಕುರಿತು ಪುಸ್ತಕಗಳನ್ನು ಬರೆದು ಕೆಲವರು ಹಣ ಮಾಡುತ್ತಾರೆ. ಸಾಮಾನ್ಯರು ಆ ಕತೆಗಳನ್ನು ಕೇಳಿ, ಓದಿ ನಂಬುತ್ತಾರೆ. ಜನ ಜಂಗುಳಿ ಈ ಅವತಾರ ಪುರುಷರ ಪಾದಪೂಜೆ ಮಾಡುತ್ತದೆ. ಕೆಲವು ಪವಾಡಪುರುಷರ ಭಕ್ತ ಸಮುದಾಯದಲ್ಲಿ ವಿದೇಶಿ ಶ್ರೀಮಂತರು ಸೇರಿದ್ದಾರೆ. ಈ ರೀತಿ ಲಕ್ಷಗಟ್ಟಲೆ ಹಣ ಸೇರುತ್ತದೆ. ಈ ಹಣ ವಂಚಕರು ಮತ್ತು ಅವರ ಪರವಾಗಿ ಪ್ರಚಾರ ಮಾಡುವ ಅವರ ಪ್ರತಿನಿಧಿಗಳಲ್ಲಿ ಹಂಚಿಕೆಯಾಗುತ್ತದೆ. ಇದೆಲ್ಲವೂ ದೇವರ ಮತ್ತು ಧರ್ಮದ ಹೆಸರಿನಲ್ಲಿ ನಡೆಯುತ್ತದೆ. ಆದ್ದರಿಂದ ಸರ್ಕಾರ ಅವರನ್ನು ಶಿಕ್ಷಿಸಲು ಅಶಕ್ತವಾಗಿದೆ.

ಅಮಾಯಕ ಜನ ಪವಾಡ ಪುರುಷರೆಂದು ಕರೆಸಿಕೊಳ್ಳುವ ವಂಚಕರಿಂದ ಮೋಸ ಹೋಗುವುದನ್ನು ತಡೆಹಿಡಿಯಲು ಆಗಾಗ ವಿಚಾರವಾದಿಗಳು ಪ್ರಯತ್ನಿಸುತ್ತಾರೆ.

ಅಂಥವರಲ್ಲಿ ಶ್ರೀಲಂಕದ ಮನೋವಿಜ್ಞಾನಿ ಡಾ॥ ಅಬ್ರಾಹಂ ಕೋವೂರ್ ಒಬ್ಬರಾಗಿದ್ದರು. ಅವರು ತಮ್ಮ ಹಣ, ಕಾಲ ಮತ್ತು ಶಕ್ತಿಗಳನ್ನು ಅವತಾರ ಪುರುಷರ ಪವಾಡಗಳನ್ನು ಪರೀಕ್ಷಿಸುವುದಕ್ಕಾಗಿ ಮೀಸಲಾಗಿಟ್ಟಿದ್ದರು.

ಡಾ॥ ಅಬ್ರಾಹಂ ಕೋವೂರರು ಜಗತ್ತಿನಲ್ಲೆಲ್ಲ ಹೆಸರಾದ ವಿಚಾರವಾದಿ ಮತ್ತು ಮನೋರೋಗ ಪರಿಣತರು. ಅವರು ತಮ್ಮ ಕೊನೆಯುಸಿರು ಎಳೆಯುವವರೆಗೂ ಶ್ರೀಲಂಕಾ ವಿಚಾರವಾದಿ ಸಂಘದ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ತಮ್ಮ ಜೀವಮಾನವೆಲ್ಲ ಅತೀಂದ್ರಿಯ ಮತ್ತು ಆಧ್ಯಾತ್ಮಿಕ ಪವಾಡಗಳನ್ನು ಕುರಿತು ಅವರು ಸಂಶೋಧನೆ ನಡೆಸಿದರು ಈ ವಿಷಯದಲ್ಲಿ ಸಂಶೋಧನೆ ನಡೆಸಿ ಡಾಕ್ಟರೇಟ್ ಪದವಿ ಪಡೆದವರಲ್ಲಿ ಇಡೀ ಜಗತ್ತಿನಲ್ಲಿ ಅವರೇ ಮೊದಲಿಗರು. ಅಮೆರಿಕಾದ ಮಿನಿಸೋಟ ಇನ್‌ಸ್ಟಿಟ್ಯೂಟ್ ಆಫ್ ಫಿಲಾಸಫಿಯು ಅವರ "ಅತೀಂದ್ರಿಯ ಹಾಗೂ ಅತಿ ಮನೋವಿಜ್ಞಾನಿಕ ಪ್ರಕ್ರಿಯೆಗಳ"ನ್ನು ಕುರಿತ ಸಂಶೋಧನಾ ಪ್ರಬಂಧಕ್ಕೆ ಡಾಕ್ಟರೇಟ್ ಪದವಿಯನ್ನು ನೀಡಿ ಗೌರವಿಸಿತು. ಅತೀಂದ್ರಿಯ, ಅತಿಮಾನಸಿಕ ಹಾಗೂ ಆಧ್ಯಾತ್ಮಿಕ ಶಕ್ತಿಗಳನ್ನು ಹೊಂದಿದವರೆಂದು ಹೇಳಿಕೊಳ್ಳುವವರೆಲ್ಲ ವಂಚಕರು ಅಥವಾ ಮಾನಸಿಕ ರೋಗಿಗಳೆಂಬುದು ಅವರ ನಿಲುವು. ಅತಿಮಾನುಷ ಶಕ್ತಿ ಯಾರಿಗೂ ಇರಲಿಲ್ಲ. ಯಾರಿಗೂ ಇಲ್ಲ. ಅದು ಧಾರ್ಮಿಕ ಗ್ರಂಥಗಳಲ್ಲಿ ಮತ್ತು ಅಗ್ಗದ ಪತ್ರಿಕೆಗಳಲ್ಲಿ ಮಾತ್ರ ಇದೆ ಎಂದು ಅವರು ಹೇಳುತ್ತಾರೆ.

ಕೋವೂರ್ ಜಗತ್ತಿನಾದ್ಯಂತ ಪ್ರಯಾಣ ಮಾಡಿದ್ದಾರೆ. ಅವರು ಕುರುಡು ನಂಬಿಕೆಗಳನ್ನು ಬಯಲಿಗೆಳೆಯುವ ಉದ್ದೇಶದಿಂದ ಭಾರತವನ್ನು ಮೂರು ಸಾರಿ ಸುತ್ತಿದರು. ಅನೇಕ ಕಡೆ ಸಾರ್ವಜನಿಕ ಉಪನ್ಯಾಸಗಳನ್ನು ಮಾಡಿದ್ದಾರೆ. ಪರಿಣತ ಗೋಷ್ಠಿಗಳಲ್ಲಿ ಪಾಲುಗೊಂಡಿದ್ದಾರೆ. ಅವರ ಸಂಶೋಧನೆಯ ಕಥೆಗಳು ಅನೇಕ ಪತ್ರಿಕೆಗಳಲ್ಲಿ ಧಾರಾವಾಹಿಯಾಗಿ ಪ್ರಕಟವಾಗಿವೆ. ಕುರುಡು ನಂಬಿಕೆಗಳನ್ನು ತೊರೆದು ವಿಚಾರ ಮಾಡುವುದನ್ನು ಕಲಿಯಿರಿ ಎಂದು ಅವರು ಜೀವನದುದ್ದಕ್ಕೂ ಸಾರಿದರು.

ಅಬ್ರಾಹಂ ಕೋವೂರ್ ಕೇರಳದ ತಿರುವಳ್ಳಿ ಎಂಬಲ್ಲಿ ೧೮೯೮ರ ಏಪ್ರಿಲ್ ೧೦ರಂದು ಜನಿಸಿದರು. ಅವರ ತಂದೆ ಮಲಬಾರ್ ಚರ್ಚ್‌ನ ಪಾದ್ರಿ ರೆವರೆಂಡ್ ಐಪೆ ಕೋವೂರ್. ಅಬ್ರಾಹಂ ತಮ್ಮ ಜನನದ ಬಗ್ಗೆ ಹೀಗೆ ಹೇಳಿದ್ದಾರೆ:

"೭೫ ವರ್ಷಗಳ ಹಿಂದೆ ನಾನು ಸುಂದರವಾದ ಕೇರಳದಲ್ಲಿ ಜನಿಸಿದೆ. ನಾನು ಹುಟ್ಟಿದ ಕುಟುಂಬ ಸಿರಿಯನ್ ಕ್ರಿಶ್ಚಿಯನ್ ಧರ್ಮಕ್ಕೆ ಸೇರಿದ್ದು. ನನ್ನ ತಂದೆ ಕ್ರಿಶ್ಚಿಯನ್ ಪಾದ್ರಿ ಆಗಿದ್ದರು. ನಾನು ಭೌಗೋಳಿಕ ಮತ್ತು ಜೀವ ವೈಜ್ಞಾನಿಕ ಆಕಸ್ಮಿಕದಿಂದ ಹುಟ್ಟಿದೆ. ನನ್ನ ಹುಟ್ಟಿನ ಮೇಲೆ ನನಗೆ ನಿಯಂತ್ರಣವಾಗಲಿ, ಆಯ್ಕೆಯ ಸ್ವಾತಂತ್ರ್ಯವಾಗಲೀ ಇರಲಿಲ್ಲ. ಆದರೆ ನಾನು ಬೆಳೆದು ದೊಡ್ಡವನಾದ ಮೇಲೆ ಅಷ್ಟೇ ಸುಂದರವಾದ ಶ್ರೀಲಂಕಾವನ್ನು ನಾನೇ ಬಯಸಿ ನನ್ನ ಜೀವನ ವಿಧಾನವನ್ನಾಗಿ ಅಳವಡಿಸಿಕೊಂಡೆ."

ಕೋವೂರ್ ಕೇರಳದಲ್ಲಿ ಪ್ರಾಥಮಿಕ ಶಿಕ್ಷಣವನ್ನು ಪಡೆದರು. ನಂತರ ಕಲ್ಕತ್ತಾದ ಬಂಗಬಾಸಿ ಕಾಲೇಜಿನಲ್ಲಿ ಜೀವ ವಿಜ್ಞಾನದಲ್ಲಿ ಉನ್ನತ ಪದವಿಯನ್ನು ಗಳಿಸಿದರು. ಕೊಟ್ಟಾಯಂನಲ್ಲಿ ಎರಡು ವರ್ಷ ಅಧ್ಯಾಪಕರಾಗಿ ಕೆಲಸ ಮಾಡಿದ ನಂತರ ೧೯೨೮ರಲ್ಲಿ ಶ್ರೀಲಂಕಾಕ್ಕೆ ವಲಸೆ ಹೋದರು. ಅಲ್ಲಿ ಜಾಫ್ನಾ ಸೆಂಟ್ರಲ್ ಕಾಲೇಜು, ರಿಚ್‌ಮಂಡ್ ಕಾಲೇಜು, ಸಂತ ಥಾಮಸ್ ಕಾಲೇಜು ಮತ್ತು ಥರ್ಸ್ಟನ್ ಕಾಲೇಜುಗಳಲ್ಲಿ ವಿಜ್ಞಾನದ ಅಧ್ಯಾಪಕರಾಗಿ ಸೇವೆ ಸಲ್ಲಿಸಿ ೧೯೫೯ರಲ್ಲಿ ನಿವೃತ್ತರಾದರು. ತಮ್ಮ ಅಧ್ಯಾಪಕ ಕೆಲಸದಿಂದ ವಿಶ್ರಾಂತಿ ಪಡೆದನಂತರ ಕೋವೂರ್ ತಮ್ಮ ಜೀವನದ ಧ್ಯೇಯ ಸಾಧನೆಗಾಗಿ ಉಪನ್ಯಾಸಗಳನ್ನು ಮಾಡಲು ಮತ್ತು ಬರೆಯಲು ಆರಂಭಿಸಿದರು. ಅತೀಂದ್ರಿಯ ಮತ್ತು ಆಧ್ಯಾತ್ಮಿಕ ರಂಗದಲ್ಲಿ ತಾವು ಜೀವಮಾನವೆಲ್ಲ ಕೈಗೊಂಡ ಸಂಶೋಧನೆಗಳನ್ನು ಕುರಿತು ಅವರು ಪ್ರಚಾರವನ್ನಾರಂಭಿಸಿದರು. "ಎಲ್ಲ ಮಕ್ಕಳಂತೆ ನಾನು ನನ್ನ ತಂದೆತಾಯಿಯರ ಧಾರ್ಮಿಕ ನಂಬಿಕೆಗಳನ್ನು ಮತ್ತು ಆಚಾರಗಳನ್ನು ತಲೆಯಲ್ಲಿ ತುಂಬಿಕೊಳ್ಳಬೇಕಾಯಿತು. ನಾನು ಬೆಳೆದು ದೊಡ್ಡವನಾದ ನಂತರ ಅವುಗಳನ್ನು ಕಿತ್ತು ಹಾಕಲು ನಾನು ತುಂಬಾ ಶ್ರಮ ಪಡಬೇಕಾಯಿತು" ಎಂದು ಕೋವೂರ್ ಹೇಳುತ್ತಾರೆ. ಅದೇ ತಪ್ಪನ್ನು ಇನ್ನೊಂದು ಸಾರಿ ಮಾಡದಿರಲು ಅವರು ತಮ್ಮ ಒಬ್ಬನೇ ಮಗನಾದ ಏರಿಸ್‌ನಿಗೆ ಧರ್ಮದ ಹೆಸರಿನಲ್ಲಿ ಅರ್ಥಹೀನ ವಿಚಾರಗಳನ್ನು ಬೋಧಿಸಿಲ್ಲ. ಡಾ॥ ಏರಿಸ್ ಕೋವೂರ್ ಈಗ ಫ್ರೆಂಚ್ ಮತ್ತು ಕ್ಯೂಬನ್ ಸರ್ಕಾರಗಳಿಗಾಗಿ ವೈಜ್ಞಾನಿಕ ಸಂಶೋಧನೆಗಳನ್ನು ನಿರ್ದೇಶಿಸುತ್ತಾರೆ.

ಶ್ರೀಮತಿ ಕೋವೂರ್ ೧೯೭೪ರಲ್ಲಿ ನಿಧನರಾದರು. ಅವರ ನಿಧನ ವಾರ್ತೆ ಶ್ರೀಲಂಕಾದ ಪತ್ರಿಕೆಗಳಲ್ಲಿ ಹಾಗೂ ಸಂಸತ್ತಿನಲ್ಲೂ ಕೋಲಾಹಲವನ್ನುಂಟುಮಾಡಿತು. ನಿಧನ ವಾರ್ತೆ ಹೀಗಿತ್ತು :

"ಶ್ರೀಮತಿ ಅಕ್ಕಾ ಕೋವೂರ್ ನಿಧನರಾದರು. ನಂಬುವ ಜನರನ್ನು ಚಿಂತೆಗೀಡು ಮಾಡಲು ಅವರು ಮನಸ್ಸನ್ನಾಗಲಿ, ಆತ್ಮವನ್ನಾಗಲಿ ತಮ್ಮ ಹಿಂದೆ ಬಿಟ್ಟು ಹೋಗಿಲ್ಲ. ಅವರ ಇಷ್ಟದಂತೆ ದೇಹವನ್ನು ಇಂದು (ಶುಕ್ರವಾರ) ಬೆಳಗ್ಗೆ 8ಕ್ಕೆ ತಿರುವಳ್ಳಿ, ಪಾಮನ್ ಕಡಲೇನ್, ಕೊಲಂಬೊ ೬ ರಿಂದ ಶ್ರೀಲಂಕಾ ವಿಶ್ವವಿದ್ಯಾಲಯದ ವೈದ್ಯಕೀಯ ವಿಭಾಗಕ್ಕೆ ಸಾಗಿಸಲಾಗುವುದು. ಅಂತ್ಯಕ್ರಿಯೆ ಇಲ್ಲ, ದಹನವಿಲ್ಲ, ಹೂವಿನ ಹಾರಗಳಿಲ್ಲ."

ಶ್ರೀಮತಿ ಕೋವೂರ್ ಅವರು ತಮ್ಮ ಪತಿಯ ಸಂಶೋಧನೆ ಮತ್ತು ಚಟುವಟಿಕೆಗಳಿಗೆ ಆಧಾರ ಸ್ತಂಭವಾಗಿದ್ದರು. ಶ್ರೀಲಂಕಾ ವಿಚಾರವಾದಿ ಸಂಘ ಆರಂಭವಾದಂದಿನಿಂದ ಅವರು ಅದರ ಕೋಶಾಧಿಕಾರಿಯಾಗಿದ್ದರು. ಅವರು ತಮ್ಮ ಪತಿಯೊಡನೆ ವಿಚಾರವಾದಿಗಳ ಅಂತರರಾಷ್ಟ್ರೀಯ ಗೋಷ್ಠಿಗಳಲ್ಲಿ ಭಾಗವಹಿಸಿದ್ದರು.

ಪವಾಡ ಪುರುಷರು, ಮಂತ್ರವಾದಿಗಳು, ಆಧ್ಯಾತ್ಮವಾದಿಗಳು, ಜ್ಯೋತಿಷಿಗಳು, ಹಸ್ತ ಸಾಮುದ್ರಿಕರು ಮುಂತಾದ ಕಪಟಿಗಳ ಹೇಳಿಕೆಗಳನ್ನು ಕೋವೂರ್ ತರ್ಕದ ಒರೆಗೆ

ಹಚ್ಚಿ ಅವು ಆಧಾರ ರಹಿತವೆಂದು ಸಾರಿದರು. ಮೋಸ ಹೋಗುತ್ತಿದ್ದ ಮುಗ್ಧ ಜನರಿಗೆ ವಿಚಾರಮಾಡಲು ಪ್ರೇರೇಪಿಸಿದರು. ಅವರು ದೆವ್ವಗಳನ್ನು ಹುಡುಕುತ್ತಾ ದೆವ್ವದ ಮನೆಗಳಲ್ಲಿ ಮಲಗಿದರು, ಸಶ್ಮಾನಗಳಲ್ಲಿ ಸುತ್ತಾಡಿದರು. ಅವರು ತಮ್ಮ ಜೀವನದ ಬಹು ಮುಖ್ಯ ಕೆಲಸಗಳನ್ನು ಅಶುಭವೆಂದು ಕರೆಯಲಾದ ಮುಹೂರ್ತಗಳಲ್ಲಿ ಆರಂಭಿಸಿದರು. ಪವಾಡ ಪುರುಷರೆಂದು ಕರೆಸಿಕೊಳ್ಳುವವರೆಲ್ಲ ವಂಚಕರೆಂದು ಮನವರಿಕೆ ಮಾಡಿಕೊಡುವ ಸಲುವಾಗಿ ಅವರು ಸಾರ್ವಜನಿಕವಾಗಿ ಈ ಮುಂದಿನ ಸವಾಲುಗಳನ್ನು ಹಾಕಿದರು :

ಪ್ರಪಂಚದ ಯಾವುದೇ ಭಾಗದ ಯಾರೇ ಆಗಲಿ ವಂಚನೆ ಇಲ್ಲದ ರೀತಿಯಲ್ಲಿ ಅತಿಮಾನುಷ ಅಥವಾ ಪವಾಡ ಶಕ್ತಿಯನ್ನು ಪ್ರದರ್ಶಿಸಿದರೆ 'ತಿರುವಳ್ಳ', ಪಾಮನ್ ಕಡಲೇನ್, ಕೊಲಂಬೋ-೬ ಅಲ್ಲಿ ವಾಸಿಸುವ ಅಬ್ರಾಹಂ ಕೋವೂರ್ ಆದ ನಾನು ಶ್ರೀಲಂಕಾದ ಒಂದು ಲಕ್ಷ ರೂಪಾಯಿಗಳನ್ನು ಕೊಡಲು ಸಿದ್ಧವಾಗಿದ್ದೇನೆ. ಈ ಸವಾಲು ನಾನು ಜೀವಂತ ಇರುವವರೆಗೆ ಅಥವಾ ಮೊದಲು ವಿಜಯಿ ದೊರೆಯುವವರೆಗೆ ಜಾರಿಯಲ್ಲಿರುತ್ತದೆ.

ಅವತಾರ ಪುರುಷರು, ಯೋಗಿಗಳು, ಸಾಧನೆಯಿಂದ ಪವಾಡ ಶಕ್ತಿ ಗಳಿಸಿಕೊಂಡಿರುವ ಯಾರೇ ಆಗಲಿ ಈ ಕೆಳಗಿನ ಯಾವುದಾದರೂ ಒಂದು ಪವಾಡವನ್ನು ಮಾಡಿದರೂ ಸಾಕು ಮೇಲಿನ ಬಹುಮಾನ ದೊರೆಯುತ್ತದೆ.

೧. ಮೊಹರು ಮಾಡಿದ ಕರೆನ್ಸಿ ನೋಟಿನ ಕ್ರಮಾಂಕವನ್ನು ಓದುವುದು.
೨. ಒಂದು ಕರೆನ್ಸಿ ನೋಟಿನ ಅಂತದೇ ಪ್ರತಿಯನ್ನು ಸೃಷ್ಟಿಮಾಡುವುದು.
೩. ಪಾದಗಳು ಬೊಬ್ಬೆ ಬರದ ರೀತಿಯಲ್ಲಿ ಉರಿಯುವ ಕೆಂಡಗಳ ಮೇಲೆ ಅರ್ಧ ನಿಮಿಷ ನಿಂತುಕೊಳ್ಳುವುದು.
೪. ಇಚ್ಛಾಶಕ್ತಿಯನ್ನು ಉಪಯೋಗಿಸಿ ಘನ ವಸ್ತುಗಳನ್ನು ಬಗ್ಗಿಸುವುದು ಅಥವಾ ಚಲಿಸುವಂತೆ ಮಾಡುವುದು.
೫. ಶೂನ್ಯದಿಂದ ನಾನು ಕೇಳುವ ವಸ್ತುವನ್ನು ಸೃಷ್ಟಿಸುವುದು.
೬. ಬೇರೆಯವರ ಮನಸ್ಸನ್ನು ಓದುವುದು.
೭. ಪ್ರಾರ್ಥನೆ, ಆಧ್ಯಾತ್ಮಿಕ ಶಕ್ತಿ, ಭಸ್ಮ, ತೀರ್ಥ ಇತ್ಯಾದಿಗಳಿಂದ ಕತ್ತರಿಸಿದ ಕೈಯನ್ನು ಒಂದು ಅರ್ಧ ಅಂಗುಲವಾದರೂ ಬೆಳೆಯುವಂತೆ ಮಾಡುವುದು.
೮. ಯೋಗ ಶಕ್ತಿಯಿಂದ ಗಾಳಿಯಲ್ಲಿ ತೇಲುವುದು.
೯. ಯೋಗ ಶಕ್ತಿಯಿಂದ ಹೃದಯದ ಬಡಿತವನ್ನು ಐದು ನಿಮಿಷ ನಿಲ್ಲಿಸುವುದು.
೧೦. ನೀರಿನ ಮೇಲೆ ನಡೆಯುವುದು.
೧೧. ದೇಹವನ್ನು ಒಂದು ಸ್ಥಳದಲ್ಲಿ ಬಿಟ್ಟು ಇನ್ನೊಂದು ಸ್ಥಳದಲ್ಲಿ ಬರಿಸುವುದು.
೧೨. ಯೋಗಶಕ್ತಿಯಿಂದ ೩೦ ನಿಮಿಷ ಉಸಿರಾಡದಿರುವುದು.
೧೩. ಯಾವುದೇ ರೀತಿಯ ಧ್ಯಾನದಿಂದ ಕ್ರಿಯಾತ್ಮಕ ಬುದ್ಧಿಶಕ್ತಿಯನ್ನು ಬೆಳೆಸಿ

ಕೊಳ್ಳುವುದು ಅಥವಾ ಜ್ಞಾನವನ್ನು ಪಡೆಯುವುದು.

೧೪. ಪುನರ್ಜನ್ಮ ಅಥವಾ ದೆವ್ವ ಹಿಡಿದ ಪರಿಣಾಮವಾಗಿ ಗೊತ್ತಿರದ ಭಾಷೆಯಲ್ಲಿ ಮಾತಾಡುವುದು.

೧೫. ದೆವ್ವ ಅಥವಾ ಭೂತವನ್ನು ಫೊಟೋ ತೆಗೆಯಲು ಸಾಧ್ಯವಾಗುವಂತೆ ತೋರಿಸಿ ಕೊಡುವುದು.

೧೬. ಫೊಟೋ ತೆಗೆದ ಮೇಲೆ ಫಿಲ್ಮಿನಿಂದ ಕಣ್ಮರೆಯಾಗುವುದು.

೧೭. ಬೀಗ ಹಾಕಿದ ಕೊಠಡಿಯಿಂದ ಹೊರ ಬರುವುದು.

೧೮. ಒಂದು ವಸ್ತುವಿನ ತೂಕವನ್ನು ಹೆಚ್ಚು ಮಾಡುವುದು.

೧೯. ಬಚ್ಚಿಟ್ಟ ವಸ್ತುವನ್ನು ಕಂಡುಹಿಡಿಯುವುದು.

೨೦. ನೀರನ್ನು ಪೆಟ್ರೋಲ್ ಅಥವಾ ವೈನ್ ಆಗಿ ರೂಪಾಂತರಿಸುವುದು.

೨೧. ವೈನನ್ನು ರಕ್ತವನ್ನಾಗಿ ಮಾಡುವುದು.

೨೨. ಹತ್ತು ಜನರ ಕುಂಡಲಿ ಅಥವಾ ಅಂಗೈ ಗುರುತುಗಳನ್ನು ಮತ್ತು ಅವರು ಹುಟ್ಟಿದ ಕಾಲ ಹಾಗೂ ಹುಟ್ಟಿದ ಸ್ಥಳಗಳನ್ನು ಸರಿಯಾಗಿ ತಿಳಿಸಿದಾಗ, ಅವರಲ್ಲಿ ಸತ್ತವರಾರು, ಬದುಕಿದವರಾರು, ಗಂಡಸರಾರು, ಹೆಂಗಸರಾರು ಎಂದು ತಿಳಿಸುವುದು.

ಈ ಸವಾಲು ಮುಂದಿನ ನಿಯಮಗಳಿಗೆ ಅನುಗುಣವಾಗಿರುತ್ತದೆ.

೧. ಸವಾಲನ್ನು ಅಂಗೀಕರಿಸಿದವರು ನನ್ನ ಅಥವಾ ನನ್ನ ಪ್ರತಿನಿಧಿಯ ಬಳಿ ರೂ. ೧೦೦೦ ಠೇವಣಿ ಇಡಬೇಕು. ಕೆಲವರು ಕೇವಲ ಪ್ರಚಾರಕ್ಕಾಗಿ ನನ್ನ ಕಾಲ, ಹಣ ಮತ್ತು ಶಕ್ತಿಗಳನ್ನು ಹಾಳುಮಾಡದಿರಲೆಂದು ಈ ನಿಯಮವನ್ನು ಸೇರಿಸಲಾಗಿದೆ.

೨. ಠೇವಣಿ ಇಡದವರೊಡನೆ ಈ ಬಗ್ಗೆ ಪತ್ರ ವ್ಯವಹಾರ ಮಾಡಲಾಗುವುದಿಲ್ಲ.

೩. ಠೇವಣಿಯನ್ನು ಇಟ್ಟಮೇಲೆ ಇಬ್ಬರಿಗೂ ಒಪ್ಪಿಗೆಯಾದ ದಿನ ನನ್ನ ಪ್ರತಿನಿಧಿ ಪ್ರಥಮ ಪರೀಕ್ಷೆಯನ್ನು ಸಾರ್ವಜನಿಕರ ಎದುರಿನಲ್ಲಿ ಮಾಡುತ್ತಾನೆ.

೪. ಆ ವ್ಯಕ್ತಿ ಪರೀಕ್ಷೆಯಲ್ಲಿ ಸೋತರೆ ಅಥವಾ ಪರೀಕ್ಷೆಗೆ ಗೊತ್ತಾದ ಸ್ಥಳಕ್ಕೆ ಬಾರದಿದ್ದರೆ ಠೇವಣಿ ಹಣವನ್ನು ಹಿಂದಿರುಗಿಸಲಾಗುವುದಿಲ್ಲ.

೫. ಆ ವ್ಯಕ್ತಿಯು ಪ್ರಪ್ರಥಮ ಪರೀಕ್ಷೆಯಲ್ಲಿ ಗೆದ್ದರೆ ನಾನೇ ಖುದ್ದಾಗಿ ಅಂತಿಮ ಪರೀಕ್ಷೆಯನ್ನು ಸಾರ್ವಜನಿಕರ ಎದಿರು ನಡೆಸುತ್ತೇನೆ.

೬. ಆ ವ್ಯಕ್ತಿ ಅಂತಿಮ ಪರೀಕ್ಷೆಯಲ್ಲಿ ಗೆದ್ದರೆ ಅವನ ಠೇವಣಿ ಮತ್ತು ಒಂದು ಲಕ್ಷ ರೂಪಾಯಿಗಳನ್ನು ಅವನಿಗೆ ಕೊಡಲಾಗುವುದು.

೭. ಎಲ್ಲ ಪರೀಕ್ಷೆಗಳನ್ನು ವಂಚನೆ ಇಲ್ಲದ ರೀತಿಯಲ್ಲಿ ನನ್ನ ಪ್ರತಿನಿಧಿಗೆ ಅಥವಾ ನನಗೆ ತೃಪ್ತಿಯಾಗುವಂತೆ ಮಾಡಲಾಗುವುದು.

ಕೋವೂರ್ ಈ ಸವಾಲನ್ನು ವಿಶ್ವದಾದ್ಯಂತ ೧೯೬೩ ರಲ್ಲಿಯೇ ಪ್ರಕಟಪಡಿಸಿ

ಪ್ಪರು. ಆದರೆ ಅವರು ೧೯೭೮ರಲ್ಲಿ ನಿಧನರಾಗುವವರೆಗೂ ಯಾರೂ ಅದನ್ನು ಗೆಲ್ಲಲಿಲ್ಲ. ಅವರ ಸವಾಲಿನ ಪ್ರತಿಗಳನ್ನು ಭಾರತದ ಪ್ರಸಿದ್ಧ ಅವತಾರ ಪುರುಷರು, ಜ್ಯೋತಿಷಿಗಳು ಮತ್ತು ಹಸ್ತಸಾಮುದ್ರಿಕರು ಮುಂತಾದವರಿಗೆ ಕಳಿಸಲಾಗಿತ್ತು.

ಬೆಂಗಳೂರಿನ ಡಾ. ಜಿ. ವೆಂಕಟರಾವ್ ಮತ್ತು ಸ್ವೀಡನ್‌ನ ಕೆಜಲ್ ಐಡ್ ಸವಾಲನ್ನು ಒಪ್ಪಿಕೊಂಡು ತಲಾ ರೂ. ೧೦೦೦ ವನ್ನು ಠೇವಣಿಯಾಗಿ ಇಡುವಷ್ಟು ಪೆದ್ದತನ ತೋರಿಸಿದರು. ಇದರ ಪರಿಣಾಮವಾಗಿ ಕೋವೂರ್‌ರಿಗೆ ರೂ. ೨೦೦೦ ಲಾಭವಾಯಿತು.

ಡಾ॥ ಕೋವೂರ್‌ರು ಧಾರ್ಮಿಕ ವೇಷ ಹಾಕಿಕೊಂಡು ಮುಗ್ಧ ಜನರನ್ನು ವಂಚಿಸುವ ಡಾಂಬಿಕರ ಪಾಲಿಗೆ ಸಿಂಹಸ್ವಪ್ನವಾಗಿದ್ದರು. ಮೂಢನಂಬಿಕೆಗಳನ್ನು ಈ ಲೋಕದಿಂದ ತೊಡೆದು ಹಾಕಿ ವಿಚಾರವಾದದ ತಳಹದಿಯ ಮೇಲೆ ಮಾನವೀಯ ಸಂಬಂಧಗಳನ್ನು ನೆಲೆಗೊಳಿಸಲು ಅವರು ಶ್ರಮಿಸಿದರು.

ಕೋವೂರ್ ಒಬ್ಬ ಸದಾ ಸುಖಿ ಮನುಷ್ಯರಾಗಿದ್ದರು. ವಿಚಾರವಾದಿಯಾಗುವುದು ಎಷ್ಟು ಸುಖಕರ ಎಂದು ಅವರು ತಿಳಿದಿದ್ದರು. ಮೂಢನಂಬಿಕೆ, ಭಯ ಮತ್ತು ಸಿದ್ಧಾಂತಗಳ ಬಂಧನ ಅವರಿಗಿರಲಿಲ್ಲ. ಜ್ಞಾನದ ಬೆಳಕಿನಲ್ಲಿ ಸದಾ ಸ್ವಾತಂತ್ರ್ಯವನ್ನು ಹಂಬಲಿಸುತ್ತಿದ್ದ ಮನಸ್ಸು ಅವರದು. ಆದ್ದರಿಂದಲೇ ಅವರು ತಮ್ಮ ಸಾವಿನ ನಂತರ ತಮ್ಮ ದೇಹವನ್ನು ವೈದ್ಯಕೀಯ ಸಂಶೋಧನೆಗಾಗಿ ಉಪಯೋಗಿಸಕೊಳ್ಳಬೇಕೆಂದೂ ಮತ್ತು ತಮ್ಮ ಕಣ್ಣುಗಳನ್ನು ಆವಶ್ಯಕವಿರುವ ರೋಗಿಗೆ ಜೋಡಿಸಲು ಉಪಯೋಗಿಸಬೇಕೆಂದು ಬಯಸಿದರು. ಅವರ ಇಚ್ಛೆಯನ್ನು ನೆರವೇರಿಸಲಾಯಿತು. ಕೋವೂರ್ ಒಬ್ಬ ಸಮತೋಲನವುಳ್ಳ ತುಂಬು ಬಾಳನ್ನು ಬದುಕಿದ ಯಶಸ್ವೀ ವ್ಯಕ್ತಿ.

## ಮಾಸದ ನೆನಪು

ಕಪ್ಪು ನೆಲದಲ್ಲಿ  
ಕೆಂಪು ನೆತ್ತರು ಹನುಕಿ  
ಇಂಗಿದ ರೀತಿಗೆ ಕನಗು ವಾಸನೆ  
ಮೂಗಿಗಡರಿದಾಗ  
ಸೂರ್ಯನನ್ನೂ ಮೀರಿ  
ಕೆಂಗಣ್ಣುಗಳ ಉರಿಸಿದ್ದು  
ಇನ್ನೂ ಮಾಸದ ನೆನಪು

—ತಿಮ್ಮನಹಳ್ಳಿ ವೇಣುಗೋಪಾಲ್

# ರಾಮರಾಜ್ಯದ ಪ್ರಜೆಗೆ

○ ರಾ. ಮೂರ್ತಿ

ಗಾಂಧಿ ಕನಸಿನ ರಾಮರಾಜ್ಯದ ಪ್ರಜೆ ಹೇಗಿದ್ದೀಯಾ ?
ಖಾದಿ (ಕಿ) ಕಾವಲಿನಲ್ಲಿ 'ಕತ್ತಲೆ' ಕ್ಷೇಮವಾಗಿದೆಯೊ ?
ಇನ್ನೆಷ್ಟು ಒಲೆಗಳು ಪಾಳು ಬಿದ್ದೊ
ಇನ್ನೆಷ್ಟು ಮಡಕೆಗಳು ಹಾಳುಬಿದ್ದೊ
ಇತ್ತೀಚೆಗಷ್ಟೇ ಬೀದಿಯ ಮೇಲೆ ಚೆಲ್ಲಿದ
ನವನಾಗರೀಕರ ರಕ್ತ ಎಷ್ಟು ?
ಪ್ರಭು
ಕೃಷ್ಣ ಚೇಷ್ಟೇಯ ಮಂದಿ ಇನ್ನೆಷ್ಟು
ಬಡವರ ಭಟ್ಟೆ ಹರಿದರು
ಸದ್ಯ ಚಿಂದಿ ತೊಟ್ಟವರ ಸಂಖ್ಯೆ ಎಷ್ಟು ?
ಹೇಗಿದೆ ನಿನ್ನ ಹಣೆಬರಹ ?
ಬಡತನದ ಹೊದಿಕೆ ಬೆಚ್ಚಗಿದೆಯಾ ಮರಿ
ಬಿಸಿಲು, ಧಗೆ, ಸೆಕೆಯಾಗುವುದಿಲ್ಲವ ?
ಹಣೆಬರಹ ತಿದ್ದುವ ಜಾಗವಿದೆ, ನಿನ್ನಿಂದ ಆ ಜಾಗ
ದೂರವೇನಿಲ್ಲ; ಅಲ್ಲಿಯೂ ಮನುಷ್ಯರಿದ್ದಾರೆ
ಗೋರಿಗಳನ್ನು ತೋಡುತ್ತಿದ್ದಾರೆ; ಯಾರನ್ನೂ ಮಲಗಿಸಿಲ್ಲ
ಇನ್ನೂ ಖಾಲಿ ಗೋರಿಗಳು
ಹೋಗಿ ನೋಡಪ್ಪಾ ನೋಡು !–
ಗೋರಿ ತೋಡುವ ಜನ ಸ್ವಲ್ಪ ಕೆಂಪು
ಬಿಳಿ ಮನಸ್ಸು ಕಣಯ್ಯ ಅವರದು
ಕೊಂಚ ಕೋಪಿಷ್ಟರು
ಆದರೆ, ಶಾಂತಿ ಬಯಸುವ ಜನ ನೋಡು
ನಿನಗಿಂತ ಸ್ವಲ್ಪ ಒರಟರೆ
ಗೋರಿ ತೋಡುವುದರಲ್ಲಿ ಮಾತ್ರ !
ಸುಲಿಗೆಕೋರರು; ಹಾಂ ಗೊತ್ತೇನು ನಿನಗೆ ?

ಗೊತ್ತಿಲ್ಲದೆ ಏನು ? ಈ ರಾಜ್ಯದಲ್ಲಿ ಅವರು ನಿನ್ನ ನೆರಳು
ನೋಡು ಮರಿ, ಈ ನೆರಳಿಗೂ ಗೋರಿಗೂ ಸಂಬಂಧ ಕಲ್ಪಿಸಬೇಡ
ಬೇಗ ಜಾಣನಾಗಬೇಡ–ಅಪಾಯ !
ಜಾಸ್ತಿ ಖಾಲಿ ಗೋರಿಗಳನ್ನೆ ತೋಡುವುದರಲ್ಲಿ
ತಲ್ಲೀನ ರಾದವರಲ್ಲಿಗೆ ಒಮ್ಮೆ ಹೋಗು ಮರಿ
ನಿನ್ನ ಹಣೆಬರಹ ಬದಲಾಗುತ್ತದೆ.
ಏಯ್ ನರಸತ್ತವನೆ ! ಸೋಂಬೇರಿ !
ಆಮೇಲೆ ನೋಡುತ್ತಿರು; ನಿನ್ನ ಹಣೆಬರಹದೊಂದಿಗೆ
ಖಾಕಿ ಖಾದಿ ಕಾವಿ.........ಹೀಗೆ
ಇಡೀ ವ್ಯವಸ್ಥೆಯೇ ಬದಲಾಗುತ್ತದೆ
ಉರಿಯದ ಒಲೆಗಳು ಉರಿಯುತ್ತವೆ
ಬರೆಯದ ಕೈಗಳು ಬರೆಯುತ್ತವೆ
ನನಗೂ ನಿನಗೂ ಹೊಸಬಟ್ಟೆ ಸಿಕ್ಕುತ್ತೆ.
ಹೊಸ ಬದುಕು ದಕ್ಕುತ್ತೆ.
ದಕ್ಕುತ್ತೇ ಕಣೊ ದಕ್ಕುತ್ತೆ.

## ನೋವಿಲ್ಲದ ಸಾವು !

ನನ್ನ ತೋಳ ತೆಕ್ಕೆಯಲ್ಲಿ
ಅವಳು ಬೆತ್ತಲಾಗಿರುವಾಗ
ನ್ಯೂಕ್ಲಿಯರ್ ಸಿಡಿದರೂ
ನಾನು ನೋವಿಲ್ಲದೆ ಸಾಯುವೆ.

ಟಿಪ್ಪಣಿ ರಂಗನೋಟ

# ಕಾವ್ಯರಂಗ; ಆಶಯ ಮತ್ತು ಪ್ರಯೋಗ

ಸಾಹಿತ್ಯಕ ವಲಯದಲ್ಲಿ ಎಚ್. ಎಸ್. ಶಿವಪ್ರಕಾಶ್ ಇಂದು ಹೆಚ್ಚು ಕೇಳಿ ಬರುತ್ತಿರುವ ವ್ಯಕ್ತಿ. ತಮ್ಮ 'ಮಿಲರೇಪ' 'ಮಳೆ ಬಿದ್ದ ನೆಲದಲ್ಲಿ' ಕವನ ಸಂಕಲನಗಳ ಮೂಲಕ ಸುದ್ದಿ ಮಾಡಿರುವ ಶಿವಪ್ರಕಾಶರ ಪ್ರಾತಿನಿಧಿಕ ಕವನಗಳು 'ಸಿಂಗಿರಾಜ ಸಂಪಾದನೆ' ಮತ್ತು 'ಸಮಗಾರ ಭೀಮವ್ವ'.

ನಮ್ಮ ರಂಗಭೂಮಿಯ ವಲಯದಲ್ಲಿ ನಡೆದ ಎಷ್ಟೋ ಹೊಸ ಸಾಹಸಗಳ ಮಧ್ಯ ಕಾವ್ಯಕ್ಕೂ ಮತ್ತು ರಂಗಕ್ಕೂ ಕೊಂಡಿ ಹಾಕುವ ಈ ಪ್ರಯತ್ನ ತೀರಾ ಹೊಸದು. ಕಥೆಗೆ ರಂಗಭೂಮಿಯನ್ನು ತಳುಕು ಹಾಕಿದ ನಂತರದ ದಿನಗಳಲ್ಲಿ ಕಾವ್ಯವನ್ನು ರಂಗ ಭೂಮಿಯೊಂದಿಗೆ ತುಳುಕು ಹಾಕುವ ಪ್ರಯತ್ನ ಸ್ವಾಗತಾರ್ಹ. 'ಕಾವ್ಯ ಮಂಡಲ'ದ ಎಷ್ಟೋ ದಿನಗಳ ಕನಸಿನ ಕೂಸು ಇದು. ಕಾವ್ಯವನ್ನು ಓದದವನಿಗೂ ಸಹ ಕಾವ್ಯ ವನ್ನು ಮುಟ್ಟಿಸುವ ಮಹದಾಕಾಂಕ್ಷೆಯನ್ನು ಹೊತ್ತು ಈ ಕಾವ್ಯರಂಗ ಅಸ್ತಿತ್ವಕ್ಕೆ ಬಂತು. ಇದರ ಜೊತೆಯಲ್ಲಿಯೇ 'ನೋಟ'ದ ಅಂಶಗಳನ್ನೂ ಸೇರಿಸಿ ಹೊಸ ಆಯಾಮ ನೀಡಬೇಕೆಂಬ ಹುಮ್ಮಸ್ಸೂ ಇತ್ತು. ಯಾವುದೇ ಮೊದಲ ಪ್ರಯತ್ನಗಳನ್ನು ವಿಮರ್ಶಿ ಸುವುದು ಅತ್ಯಂತ ರೇಜಿಗೆಯ ಕೆಲಸವಾಗಿ ಬಿಡುತ್ತದೆಯಲ್ಲದೆ, ಹೊಸ ಪ್ರಯತ್ನ ಗಳಿಗೆ ಕೆಲವೊಮ್ಮೆ ಈ ವಿಮರ್ಶೆಗಳು ಅವುಗಳ ಉತ್ಸಾಹವನ್ನು ಬತ್ತಿಸಿಬಿಡುವ ನೆಗೆಟಿವ್ ಕೆಲಸಗಳನ್ನು ಮಾಡಿ ಬಿಡುತ್ತದೆಯಾದ್ದರಿಂದ ವಿಮರ್ಶೆಗಿಂತ ಹೆಚ್ಚಾಗಿ ಆ ಪ್ರಯತ್ನದ ವಿಶ್ಲೇಷಣೆ ಹೆಚ್ಚು ಒಳ್ಳೆಯದೆನಿಸುತ್ತದೆ.

ಕನ್ನಡ ರಂಗಭೂಮಿ ಇಂದಿನ ಯಾವುದೇ ಭಾಷೆಯ ರಂಗಭೂಮಿಯೊಂದಿಗೆ ಹೋಲಿಸಿದಾರೆ ಹೊಸ ಹೊಸ ಪ್ರಯತ್ನಗಳ ಮೂಲಕ ಹೆಚ್ಚು ಜೀವಾಂತವಿರುವ ರಂಗ ಭೂಮಿ. ಈ ರಂಗಭೂಮಿಯನ್ನು ಇಷ್ಟೇ ಎಂದು ಹೇಳಿ ಚೌಕಟ್ಟು ಹಾಕಿಬಿಡುವುದು ತೀರಾ ಅನ್ಯಾಯವಾದ ಕೆಲಸವಾಗಿ ಬಿಡುವುದರಿಂದ 'ಕಾವ್ಯರಂಗ'ದ ಉದ್ದೇಶಗಳನ್ನು ನಾವು ಇನ್ನೂ ಇಂತಹ ಹೆಚ್ಚು ಹೆಚ್ಚು ಪ್ರಯತ್ನದ ಹಿನ್ನೆಲೆಯಲ್ಲಿ ಕಂಡುಕೊಳ್ಳ ಬೇಕಾಗಿದೆ.

ಕಾವ್ಯ ಇದುವರೆಗೂ ಓದುಗನ ಮನೋಭೂಮಿಯಲ್ಲಿ ಪ್ರತಿ ಸೃಷ್ಟಿಯಾಗುವ ಒಂದು ದೃಶ್ಯ ಸರಣಿ. ಓದುಗನ ಮುಂದೆ ನಾವು ಇಂತದೇ ಪಾತ್ರಗಳನ್ನು ಇಡುವು ದಿಲ್ಲವಾದ್ದರಿಂದ ಓದುಗ ಕಲ್ಪಿಸಿಕೊಳ್ಳುವ ರಾಗ, ವ್ಯಕ್ತಿ, ನಟಿ, ನಾವು ನಾಟಕದಲ್ಲಿ

ನಿರ್ದಿಷ್ಟ ನಟನನ್ನು ಮುಂದಿಡುವುದರಿಂದ ಓದುಗನಿಗೆ ಹೋಲಿಸಿದರೆ 'ಪ್ರೇಕ್ಷಕ ಸೃಷ್ಟಿ ಕೆಲಸವಿಲ್ಲದೆ ಕೇವಲ 'ಗ್ರಾಹಕ' (Reciever) ಆಗಿ ಉಳಿದು ಬಿಡುತ್ತಾನೆ. ನಾವು ನೀಡುವುದಷ್ಟನ್ನೆ ಸ್ವೀಕರಿಸಿಬಿಡುವುದು ಅವನ ಕೆಲಸವಾಗಿ ಬಿಡುತ್ತದೆ. ಈ ಅಂಶ ನಾವು ಕಾವ್ಯಕ್ಕೆ ಹಚ್ಚಬಹುದಾದ ಹಲವು ಅರ್ಥಗಳಿಗೆ ತಡೆ ಹಾಕಿಬಿಡುತ್ತದೆಯಾದ್ದರಿಂದ 'ಕಾವ್ಯ'ದ ಯಾವುದೋ ಒಂದು ಗುರುತಿಸಲಾಗದ ವಿಶೇಷತೆಯನ್ನು ಇಲ್ಲಿ ಕಡಿಮೆ ಮಾಡುತ್ತಿದ್ದೇವೇನೋ ಅನಿಸುತ್ತದೆ. ಕೋಸಲದ ಅರಸು ಕುಮಾರನ ಪ್ರೀತಿಗಾಗಿ ದುಂಬಾಲು ಬೀಳುವ 'ವಾಸವದತ್ತೆ' ನಾಟಕವಾದರೆ ಕೇವಲ ವಾರಾಂಗನೆ ವಾಸವದತ್ತೆಯಾಗಿ ಉಳಿದುಬಿಡಬಹುದಾದರೂ ಓದುಗ ವಾಸುದತ್ತೆಯನ್ನು ಸ್ವೀಕರಿಸುವುದು ಭಿನ್ನ ಭಿನ್ನ ಹಂತಗಳಲ್ಲಿ ತಾವು ಕಂಡ. ಪ್ರೇಮಿಸಿದ. ಸ್ಪಂದಿಸಿದ ಹೆಣ್ಣಿನ ಹಿನ್ನೆಲೆಯಲ್ಲಿ 'ಕಾವ್ಯರಂಗ'ಕ್ಕೆ ಇದೇ ಒಂದು ದೊಡ್ಡ ಮಿತಿಯಾಗಿ ಬಿಡುತ್ತದೆ.

'ಸಿಂಗಿರಾಜ ಸಂಪಾದನೆ' ಕಾವ್ಯ ಹುಟ್ಟಿಕೊಂಡಿರುವುದು ಮುಖ್ಯವಾಗಿ ಸ್ವಗತಗಳ ಪ್ರಧಾನ ನೆಲೆಯಲ್ಲಿ. ಈ ಕಾವ್ಯದಲ್ಲಿ ಬಿಜ್ಜಳನ ವಿರುದ್ಧ ಮಾತನಾಡಲಾಗದ ಎಷ್ಟೋ ಧ್ವನಿಗಳು ಪಿಸುಮಾತುಗಳಾಗಿ ನಂತರ ಸ್ವಗತಗಳಾಗಿ ಬದಲಾಗುತ್ತದೆ. ಸ್ವಗತಗಳ ಮಧ್ಯೆ ನಮಗೆ ನೇರವಾಗಿ ಹೊಡೆದು ಕಾಣುವ ಧ್ವನಿಯೆಂದರೆ ಸಿಂಗಿರಾಜನೊಬ್ಬನದೆ. ಬಿಜ್ಜಳ ಬಸವಣ್ಣನನ್ನು ಹೊರಹಾಕಿದಾಗ ಕಲ್ಯಾಣದ ಹಣತೆಯ ಕುಡಿಗಳಾದ ಶಿವಶರಣರ ಅಸಮಾಧಾನದ ಪ್ರತೀಕವಾಗಿ ಸಿಂಗಿರಾಜ ಎದ್ದು ಕಾಣುತ್ತಾನೆ, ಬಿಜ್ಜಳನ ಸೆರೆಮನೆಯಲ್ಲಿ ಬಂಧಿಯಾಗಿದ್ದರೂ ಸಹ ಈತ ತನ್ನ ಅಸಮಾಧಾನವನ್ನು ಹೊರಹೊಮ್ಮುವುದರಲ್ಲಿ ಯಶಸ್ವಿಯಾಗುತ್ತಾನೆ. ಬಿಜ್ಜಳನನ್ನು ಪ್ರತಿಭಟಿಸುವ ಸಿಂಗಿರಾಜನ ಮಾನಸಿಕ ತುಮುಲಗಳು ಈ ಕವನದ ವಸ್ತು.

ಪ್ರಯೋಗದ ಬಗ್ಗೆ ಹೇಳುವುದಾದರೆ, ಕವನದ ಸಮರ್ಥ ನಾಟಕೀಯ ಅಂಶಗಳನ್ನು ಇನ್ನೂ ಹೆಚ್ಚು ಅರ್ಥಪೂರ್ಣವಾಗಿ ಬಳಸಬಹುದಿತ್ತೇನೋ ಎನಿಸುತ್ತದೆ. ಬಸವಣ್ಣ ಹೋದನಂತರ ಕಲ್ಯಾಣದಲ್ಲಿದ್ದ ಆತಂಕ, ತುಮುಲಗಳು ಯಾವುವೂ ಸಹ ಪ್ರೇಕ್ಷಕಗೆ ಅರಿವಾಗಲೇ ಇಲ್ಲ. ಬಸವಣ್ಣ ಕಲ್ಯಾಣದಿಂದ ಹೊರಹೋಗುವಂತೆ ಮಾಡುವಲ್ಲಿ ವೈದಿಕರ ಕುತಂತ್ರಗಳು ಅದರಿಂದಾಗಿ ಉಂಟಾಗುವ ಸ್ಥಿತಿಗಳನ್ನು ಉಪಯೋಗಿಸಿ ಆ ಹಿನ್ನೆಲೆಯಲ್ಲಿ ಸಿಂಗಿರಾಜನ ಬಂದೀಖಾನೆಯ ದೃಶ್ಯಕ್ಕೆ ಇನ್ನೂ ಹೆಚ್ಚು ವಿಶಾಲವಾದ ಅರ್ಥ ಕೊಡಬಹುದಿತ್ತೇನೋ....? ಸಿಂಗಿರಾಜ ಕವನದ—

'ಕತ್ತಿ ನೆಕ್ಕಿದ ರಕ್ತ ಹನಿಯಲ್ಲಿ  
ಹನಿಯ ಕಣದಲ್ಲಿ  
ಕಣದ ಅಣುವಿನಲ್ಲಿ  
ಎಷ್ಟೊಂದು ಜನ ಸಿಂಗಿರಾಜರ ಮೊಳೆತ  
ಮಳೆ ಹನಿಯ ಮೆಲುಸಿಡಿತದೊಳಗಲ್ಲೂ  
ಹದಿನೈದು ಶತಕದ ಬೆಳೆ ಅಡಗಿದಂತೆ'

'ಬಯಕೆ ಬಿಸಿಲಿಗೆ ಬಿರುಕು ಬಿರುಕಾದ ಎದೆಯ ನೆಲೆಗಳ ಮೇಲೆ ಮಳೆಯ ತರಬೇಕು' ಎಂಬ ಆಶಯಗಳು ಸಂಪೂರ್ಣ ಇಲ್ಲವಾಗಿ ಸಿಂಗೀರಾಜ ನಾಟಕದ ಆರಂಭದಿಂದ ಕೊನೆಯವರೆಗೂ ಯಾವುದೇ ರೀತಿಯ ಘರ್ಷಣೆ (conflict) ಯನ್ನು ಕಾಣದೆ ನೀರಸವಾಗುತ್ತದೆ.

ಕಾವ್ಯದ ನಾಟಕೀಯ ಅಂಶಗಳನ್ನು ಹೇಳಲು ರಂಗದ ಮೇಲೆ 'ಮಿಡಿತಗಳ'ನ್ನು ಬಳಸಿಕೊಂಡಿದ್ದು ನಾಟಕದ 'ಪ್ಲಸ್' ಅಂಶವಾಗಿ ರಂಗದ ಮೇಲೆ ಚುರುಕಿದಿಂದ ಕೂಡಿತ್ತು. (ರಮೇಶ್ ಪಂಡಿತ್, ಭರಮಪ್ಪ, ಸತೀಶ್ ಅನಂತರಾಮು) ಬಿಜ್ಜಳ, ಬಸವಣ್ಣರನ್ನು ತೋರಿಸಲು ಉಪಯೋಗಿಸಿದ frame ಚಿಕ್ಕದಾಗಿದ್ದು ಬಸವಣ್ಣ ಪ್ರೇಕ್ಷಕರಿಗಂತೂ ನೆರಳಾಗಿ ಉಳಿಯಲಿಲ್ಲ. ನಾಟಕ ನಡೆಯುತ್ತಿದ್ದಾಗಲೇ frame ಹಿಂದೆ ನಿಲ್ಲಲು ಬಿಜ್ಜಳ, ಬಸವಣ್ಣರು ತೆಗೆದುಕೊಳ್ಳುತ್ತಿದ್ದ ಎಂಟ್ರಿಗಳು ಕಣ್ಣಿಗೆ ರಾಚುತ್ತಿದ್ದವು. ಕಾವ್ಯದ ಬೆಳವಣಿಗೆಯ ಜೊತೆ ಸ್ಪಂದಿಸಲಾಗದೆ ಸ್ಥಗಿತವಾದ ಕಾರಣ ಈ ಸ್ಥಗಿತತೆ ಮತ್ತು ಬೆಳವಣಿಗೆ ಪ್ರೇಕ್ಷಕರನ್ನು ಗೊಂದಲಕ್ಕೆ ತಳ್ಳುತ್ತಿತ್ತು.

ಆಧ್ಯಾತ್ಮದ ವಲಯದಲ್ಲಿ ಸಂಚರಿಸಿದ್ದರೂ ಕೊನೆಗೆ ಸಮಾಜದ ಬಂಧನಗಳಿಗೇ ಮರಳಿದ ನಾಗಲಿಂಗ ಯೋಗಿಯ ಕಥೆ ಸಮಗಾರ ಭೀಮವ್ವ. 'ನಾಗಲಿಂಗ','ಭೀಮವ್ವ' ಕಾವ್ಯದ ಎರಡು ಮುಖ್ಯ ಧ್ವನಿಗಳು. ಈ ಇಬ್ಬರು ವ್ಯಕ್ತಿಗಳ ಸುತ್ತ ಹಬ್ಬಿರುವ ಎರಡು ಭಿನ್ನ ವಲಯಗಳ ರಾಜಿ ಈ ನಾಟಕದ ವಸ್ತು. ನಾಗಲಿಂಗನ ಆರ್ತತೆಯೇ ಪ್ರಧಾನವಾದ ನಾಟಕದಲ್ಲಿ ಯಾಂತ್ರಿಕತೆ ಮತ್ತು ಪ್ರಕೃತಿಯ ನಡುವಣ ದ್ವಂದ್ವಗಳ ಪ್ರತಿನಿಧಿಗಳಾಗಿ ಗುರುತಿಸಲಾದ ಪಾತ್ರಗಳು ಸೊರಗಿದ್ದು ಮುಖ್ಯವಾಗಿ ಮೇಳವನ್ನು ರಂಗದಿಂದ ಬೇರ್ಪಡಿಸಿದ್ದರಿಂದ. ಅಭಿನಯ ಮತ್ತು ವಾಚನ ಬೇರೆಯಾದ್ದರಿಂದ ಪ್ರೇಕ್ಷಕನಿಗೆ ಮೇಳ ಅಥವಾ ರಂಗದ ನಡುವಿನ ಆಯ್ಕೆ ಕಷ್ಟವಾಗುತ್ತಿತ್ತು. ಕಿರುರೂಪಕವಾದ 'ಸಮಗಾರ ಭೀಮವ್ವ' ಶಿವಪ್ರಕಾಶರ ವಾಚನದ ಮೇಲೆಯೇ ಸಂಪೂರ್ಣವಾಗಿ ಅವಲಂಬಿತವಾಗಿತ್ತು. ಗ್ರೊಟೋವ್‌ಸ್ಕಿಯ 'ರಿಕ್ತರಂಗಭೂಮಿ' (poor theatre) ಮಾದರಿಯಲ್ಲಿ ತಮ್ಮ ದೇಹದ ಅಂಗಾಂಗಳ ಮೂಲಕ ಮಾತುಗಳನ್ನು ಹೊರಗಡೆಹಿದ ಬಸವಲಿಂಗಪ್ಪನವರ ಅಭಿನಯ ಉತ್ತಮವಾಗಿದ್ದರೂ ಪಕ್ಕಾ ನಿರ್ದೇಶ ವಿಲ್ಲದೆ ಹಸಿಹಸಿ ಪ್ರಯೋಗವಾಗಿಯೇ ಉಳಿದುಬಿಟ್ಟಿತು. ಉತ್ತಮ ರಂಗವಿನ್ಯಾಸ (ಎಂ. ಸಿ. ಆನಂದ್) ರಂಗಸಜ್ಜಿಕೆ (ರಘುನಂದನ್, ಬಸವಲಿಂಗಪ್ಪ) ಭೀಮವ್ವನಾಗಿ ಬಿ. ಜಯಶ್ರೀಯವರ ಅಭಿನಯ ನಾಟಕದಲ್ಲಿ ಗಮನಿಸಬಹುದಾಗಿದ್ದ ಉತ್ತಮ ಅಂಶಗಳು.

—ಮೋಹನ್ ಜಿ. ಎನ್.

---

*ಸಂಪ್ರದಾಯಗಳ ಕಡುವಿರೋಧಿಯಾಗಿ, ಹಠಮಾರಿತನದ ಬದುಕನ್ನು ಸಾಗಿಸಿ, ನಾಟಕ ಕ್ಷೇತ್ರಕ್ಕೆ ಅನುಪಮ ಕೊಡುಗೆಯಾಗಿದ್ದ ಶ್ರೀರಂಗರು ಇತ್ತೀಚೆಗೆ ನಿಧನರಾಗಿದ್ದಕ್ಕೆ 'ಅನ್ವೇಷಣೆ' ಕಂಬನಿಗರೆಯುತ್ತದೆ.

ಸೃಷ್ಟಿ

Everyone Speaks well of his heart, but no one dares to say it of his head.

—**La Rochefoucauld**

# ಕಪ್ಪು ನೆಲದ ಕೆಂಪಸಿಗು : ಹೊಸನಾಡಿನ ಉಸಿರು

ಟೀಕೆಗಳಿಗೆ ನನ್ನ ಹೃದಯದ ಬಾಗಿಲು ಸದಾ ತೆರೆದಿದೆ

ನೀವು ಅದರೊಳಗೆ ಒಕ್ಕು ನನ್ನ ಮಿಡಿತ ಸಮತೋಲನಗೊಳಿಸಿ

—ಎಂದು ಕವಿಯಾಗಿ ನಾನು ನಿಮ್ಮೊಂದಿಗೆ ಮಾತಾಡತೊಡಗುತ್ತೇನೆ : ಕಾವ್ಯದ ಮಾತುಗಳನ್ನು ಸೃಷ್ಟಿಸದೆ, ಶಬ್ದ ಭಂಡಾರದ ಗಣಿಯೊಳಗೆ ಹೂತು ಅರ್ಥಕ್ಕಾಗಿ ಹುಡುಕಾಡದೆ ನೇರವಾಗಿ ಹೇಳುತ್ತೇನೆ—

ಸೆಪ್ಟಂಬರ್ ತಿಂಗಳ ಪ್ರಾರಂಭದ ದಿನಗಳವು.

ರಾಜಧಾನಿಯ ಯಾಂತ್ರಿಕ ಬದುಕಿನಿಂದ ಮೈ ಪರಚಿಕೊಳ್ಳುವಷ್ಟು ಸಿಟ್ಟು. ನೆಮ್ಮದಿಯ, ಸ್ವಚ್ಛ ಉಸಿರನ್ನಂತೂ ಎಳೆದುಕೊಳ್ಳುವಂತಿಲ್ಲ. ರಾಕ್ಷಸ-ನಮ್ಮ ಕಲ್ಪನೆಯ ಭಯಾನಕ, ಬೃಹತ್ ಆಕಾರದ ಚಿತ್ರ ಕಣ್ಣು ಮುಂದೆ ಸುಳಿವಂತೆ ; ನನ್ನ ವಾಸ ಇದರೊಳಗೆ ಒಂದು ಕೂಡಲಿನ ಸ್ಥಾನವಾದರೂ ಇದ್ದಿರಬಹುದು. ಮಾನಸಿಕ ನೆಮ್ಮದಿ ಬೇಕೆಂದವರಿಗೆ ಸಧ್ಯದ ಜಂಜಾಟದಿಂದ ಬಿಡುಗಡೆಯ ಅಗತ್ಯವಿರುವಂತೆ ನಾನೊಂದು ಪುಟ್ಟ ಪ್ರವಾಸ ಕೈಗೊಂಡೆ. ಮಾಮೂಲಿ ಸಿಟಿಬಸ್‌ಗಳ ತೊಂದರೆ, ಆಟೋಗಳವರ ಆಟಾಟೋಪ, ಜೀವನದ ಮಹತ್ವದ ಗಳಿಗೆಗಳನ್ನು (ಆಯುಷ್ಯದ ಬಹು ಭಾಗವನ್ನು) ಕುತ್ತು ಹಿಸುಕುವಾಗ ಕುದಿಯುತ್ತಿದ್ದ ಮನಸ್ಸಿಗೆ ನೆಮ್ಮದಿಯನ್ನು ಮನಸ್ಸು ಅಪೇಕ್ಷಿಸುತ್ತಿತ್ತು.

ರೈಲು ಓಡುತ್ತಿತ್ತು. ರಾತ್ರಿ ೮ ಗಂಟೆ ಸಮಯ. ರಾಜಧಾನಿಯ ರಂಗು ರಂಗಿನ ದೀಪಗಳು ಕುಳಿತವನಿಗೆ ಅಣಕಿಸುತ್ತಿದ್ದವು. ಹಾಗೇ ನೋಡುತ್ತಾ ಏನನ್ನೋ ಯೋಚಿಸುತ್ತಿದ್ದಂತೆ ಕತ್ತಲಗವಿ. ಕತ್ತಲನ್ನು ಸೀಳಿಕೊಂಡು ಓಡುತ್ತಿದ್ದ ರೈಲು ಹೈದರಾಬಾದ್ ಮಾರ್ಗ ಹಿಡಿದಿತ್ತು. ಇಳಿಯುವುದು ರಾಯಚೂರೇ ಆದರೂ ಆಂಧ್ರದ

---

ಬದುಕು ಎಷ್ಟೊಂದು ಕ್ರೂರ. ನಮ್ಮ ಜನಕ್ಕೆ ಸುಂದರ ಬದುಕಿಗಾಗಿ ಹಾತೊರೆಯುವ ಮನಸ್ಸುಗಳಿಲ್ಲವೆ ? ಕುಟುಂಬದ ಸಂಖ್ಯೆ ಇಳಿಮುಖವಾದರೆ ಕನಸುಗಳಿಗೆ ಬಣ್ಣದ ಪುಕ್ಕಗಳನ್ನು ಕಟ್ಟಿಕೊಂಡು ನರ್ತಿಸಲು ಸಾಧ್ಯವಿಲ್ಲವೆ ?

---

ವಿದ್ಯಮಾನಗಳೇ ತಲೆ ತುಂಬಾ. ಕಣ್ಣು ಮುಚ್ಚಿದರೂ ಏನೆಲ್ಲಾ ದೃಶ್ಯಗಳು.

ಪಂಜಾಬಿಯಾತ ಶಿಸ್ತಿನ ಸಿಪಾಯಿಯಂತೆ ಒಬ್ಬ ಸುಂದರಿಯೊಂದಿಗೆ ಎದುರು ಸೀಟಲ್ಲಿ ಕೂತಿದ್ದ. ಅಜಾನುಬಾಹು. ಶುಭ್ರ ಬಿಳಿ ಬಟ್ಟೆ. ತಲೆಯ ಮೇಲೆ ವಿಶಿಷ್ಟವಾದ ಪೇಟ. ಉದ್ದನೆಯ ಗಡ್ಡವನ್ನು ಎಡಮುರಿ ಕಟ್ಟಿ ಬಿಗಿದಿದ್ದ ದೃಶ್ಯ–ಪಂಜಾಬಿನ ಸಿಖ್ಖರ ಪ್ರಸ್ತುತ ಸ್ಥಿತಿಯತ್ತ ಮನಸ್ಸು ಹೊರಳಿಸುವಂತೆ ಮಾಡಿತ್ತು. ಕವಿ ಎಚ್. ಎಸ್. ಶಿವಪ್ರಕಾಶ್‌ರ 'ಪಂಜಾಬ್'* ಪದ್ಯದ ಸಾಲುಗಳು ಕಣ್ಣು ಮುಂದೆ ಬಂದವು. ಕವಿಯೇ ಓದಿನ್ದ ಧ್ವನಿ ಕಿವಿಯೊಳಗೆ ಗುಯ್ ಗುಡತೊಡಗಿತು.

ಬರ್ತ್‌ನಲ್ಲಿ ಕಣ್ಣುಮುಚ್ಚಿದ್ದವನಿಗೆ ಎಚ್ಚರಾಯಿತು. ಮಬ್ಬು ಬೆಳಕಿನಲ್ಲಿ ಗಡಿಯಾರ ನೋಡಿಕೊಂಡೆ. ಆಗಲೇ ಮಧ್ಯರಾತ್ರಿ ಹನ್ನೆರಡರ ಹತ್ತಿರ ಹತ್ತಿರ. ಹೊಟ್ಟೆಗೆ ಏನಿಲ್ಲದಿದ್ದರಿಂದ ತಳಮಳಗೊಂಡೆ. ರೈಲು ಹತ್ತುವ ಮುನ್ನವೇ ಕೊಂಡು ಚೀಲದಲ್ಲಿ ಹಾಕಿದ್ದ ಸೇಬು ತೆಗೆದು ತಿನ್ನತೊಡಗಿದಾಗ ಎದುರು ಬರ್ತ್‌ನಲ್ಲಿ ನಿದ್ರಿಸುತಿದ್ದ ಪಂಜಾಬಿಗಳತ್ತ ದೃಷ್ಟಿ ಹಾಯಿಸಿದೆ. ಗಡ್ಡಧಾರಿ ಮಲಗಿದ್ದಲ್ಲಿಂದಲೇ ಒಂದು ಕೈ ಎತ್ತಿ ಮೇಲಿನ ಬರ್ತ್‌ನಲ್ಲಿದ್ದ ಸುಂದರಿಯ ರವಿಕೆಯೊಳಗೆ ತೂರಿಸಿದ. ಆಕೆ ಆತನ ಕೈ ಒತ್ತಿ ಹಿಡಿದು ಮಗ್ಗಲು ಬದಲಿಸಿದಳು.

ಹಲ್ಲಲ್ಲಿ ಕಚ್ಚಿದ್ದ ಹಣ್ಣು ದಪಡೆಗೆ ಹೋಗುವ ಮುನ್ನ ಬಿಟ್ಟ ಕಣ್ಣು ಅವರ ನೆಮ್ಮದಿಗೆ ಭಂಗ ತಂದೀತೆಂದು ಹಾಗೇ ಉರುಳಿಕೊಂಡೆ. ನಿದ್ದೆ ಆ ಕ್ಷಣ ಸುಳಿಯದೆ ಇದ್ದರೂ ಕಣ್ಣು ಮುಚ್ಚಿದೆ.

ಆಂಧ್ರ ಗಡಿಯೊಳಗೆ ಮೂತಿ ತೂರಿಸಿ ಮತ್ತೆ ಕರ್ನಾಟಕ ಗಡಿಯೊಳಗೆ ಸೇರಿಕೊಂಡ 'ವೇಗ ಧೂತ ರೈಲು' ಮುಂಜಾನೆ ಸಮಯ ರಾಯಚೂರು ಸಮೀಪಿಸಿತ್ತು.

ಕಪ್ಪು ನೆಲ. ಕಣ್ಣುಹಾಯಿಸಿದತ್ತೆಲ್ಲಾ ಬರೀ ಹೊಲ. ಬೋಳು. ಬೀಳು ಬಿದ್ದ ಭೂಮಿ. ಹಸಿರಂತೂ ಕಾಣಲೇ ಇಲ್ಲ. ನಿಟ್ಟುಸಿರು ಬಿಟ್ಟೆ. ಹನಿ ಮಳೆಯೂ ಇಲ್ಲದ ಆ ಪ್ರದೇಶ 'ಬರ'ದ ಮತ್ತೊಂದು ಭಾಗವಾಗಿ ಗೋಚರಿಸಿತು.

ನನ್ನ ಹರಕು ಮುರುಕು ಹಳ್ಳಿಯಂತೆ, ಕಾಲೇಜಿನ ಪ್ರಾರಂಭದ ದಿನಗಳನ್ನು ಕಳೆದಿದ್ದ ಚಿತ್ರದುರ್ಗದ ನೆನಪನ್ನೂ ಕಲಸು ಮೇಲೋಗರದಂತೆ ಮೇಳೈಸಿಕೊಂಡ ರಾಯಚೂರು ಹೇಗೋ ನನ್ನ ಮಿಡಿತಕ್ಕೊಳಪಟ್ಟಿತ್ತು.

ರಾಜಧಾನಿಯ ಸುಂದರ ಕಾಂಕ್ರೀಟ್ ಕಟ್ಟಡಗಳು, ರಾಯಚೂರಿನಲ್ಲಿಲ್ಲದಿದ್ದರೂ ಸಾಹಿತಿಗಳ ಮಿನಿ ಬಳಗವೇ ಇಲ್ಲಿದೆ. ಹಿರಿಯ ಕವಿ ಶಾಂತರಸ, ಬಂಡಾಯ ಕವಿ ಡಾ॥ ಚೆನ್ನಣ್ಣವಾಲೀಕಾರ, ಶ್ರೀಮತಿ ಲಲಿತಾ ನಾಯಕ್, ಜಂಬಣ್ಣ ಅಮರಚಿಂತ, ಬೋಳಬಂಡೆಪ್ಪ, ಹೆಣ್ಣಿನ ಮನಸ್ಸಿನ ಸಹಜ ಭಾವನೆಗಳ ಬಿಚ್ಚಿ ನೇರವಾಗಿ ಹೇಳುವ ಕವಯಿತ್ರಿ ಮುಕ್ತಾಯಕ್ಕ–ಇವರೆಲ್ಲಾ ಸಮಾಗಮವಾಗಿರುವ ಕಲ್ಲು ಬಂಡೆಯ, ಹರಕು ಮುರುಕು

---

* ಇದೇ ಸಂಚಿಕೆಯ 'ಪಂಜಾಬ್' ಪದ್ಯ ಓದಿ

ಜಿಲ್ಲೆ ಹೃದಯವಂತ ಲೇಖಕರನ್ನು ಕಂಡಿರುವುದು ನನಗೆ ಸಂತೋಷ ತಂದಿತ್ತು.

ಸಂಜೆ ೬ರರ ಸಮಯ. ರಾಯಚೂರಿನ ಗಲ್ಲಿಗಳಲ್ಲಿ ನಡೆಯುತ್ತಿದ್ದೆವು. ಜೊತೆಯಲ್ಲಿ ಚೆನ್ನಣ್ಣ, ಜಂಬಣ್ಣ, ಕನ್ನಡದ ಉರ್ದು ಕವಿಯೊಬ್ಬರೂ ಇದ್ದರು. ಮನೆಗಳೆಂದು ಗುರ್ತಿಸಲಾರದ ಜೀರ್ಣಾವಸ್ಥೆ ಕಂಡ ಜೋಪಡಿಗಳಲ್ಲಿ ಬದುಕುತ್ತಿರುವ ನೂರಾರು ಸಂಸಾರಗಳ ಚಿತ್ರಣ ಮನಸ್ಸನ್ನು ಕರಗಿಸಿತು. ಅದೊಂದು ಮುಸ್ಲಿಂ ಬಾಂಧವರೇ ಹೆಚ್ಚಾಗಿದ್ದ ಬೀದಿ. ನರಪೇತಲ ಹೆಂಗಸಿಗೆ ಐದಾರು ಪುಟ್ಟ ಮಕ್ಕಳು ! ಹರಿದು ಚಿಂದಿಯಾದ ಬಟ್ಟೆ, ಎಲ್ಲೆಂದರಲ್ಲೇ ವಾಸ. ಬದುಕು ಎಷ್ಟೊಂದು ಕ್ರೂರ. ನಮ್ಮ ಜನಕ್ಕೆ ಸುಂದರ ಬದುಕಿಗಾಗಿ ಹಾತೊರೆಯುವ ಮನಸ್ಸುಗಳಿಲ್ಲವೆ ? ಕುಟುಂಬದ ಸಂಖ್ಯೆ ಇಳಿಮುಖವಾದರೆ ಕನಸುಗಳಿಗೆ ಬಣ್ಣದ ಪುಕ್ಕಗಳನ್ನು ಕಟ್ಟಿಕೊಂಡು ನರ್ತಿಸಲು ಸಾಧ್ಯವಿಲ್ಲವೆ ? ಹೀಗೆಲ್ಲಾ ಆಲೋಚಿಸುವ ನನ್ನಂಥವನು ಉತ್ತರಕ್ಕಾಗಿ ಬೆನ್ನುಹತ್ತಿ ಹೋಗುವ ಸಂದರ್ಭ ಕೂಡ ಇದಾಗಿದೆ. ಈ ಸಂದರ್ಭ ನಾನು ಕವಿ ಚೆನ್ನಣ್ಣನೊಂದಿಗೆ ಮಾತನಾಡುತ್ತಲೇ ಇದ್ದೆ. ಜಂಬಣ್ಣ ಮನದಲ್ಲೇ ಯೋಚಿಸುತ್ತ ಒಮ್ಮೊಮ್ಮೆ ಸಮಸ್ಯೆಗಳ ಕುರಿತು ಹೇಳುತ್ತಿದ್ದರು.

ಕತ್ತಲಾವರಿಸಿತು. ರಾತ್ರಿ ಎಂಟಾದರೂ ಶೆಖೆ ಕಡಿಮೆಯಾಗಿರಲಿಲ್ಲ. ಶಾಖೋತ್ಪನ್ನ ಘಟಕ ನಿರ್ಮಾಣವಾಗುತ್ತಿರುವ ಶಕ್ತಿನಗರದತ್ತ ಪಯಣ ಬೆಳೆಸಿದಾಗ ಕೃತಕ ನಗರವೊಂದರ ಕಲ್ಪನೆಯಲ್ಲಿ ಮುಳುಗಿದ್ದೆ. ವಾಸ್ತವದಲ್ಲೂ ಅದೊಂದು ಮರಳುಗಾಡಿನ ಓಯಸಿಸ್ಸು.

o o o o o

ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಕಾರಖಾನೆಗಳ ಒಡೆಯರು ಲಾಭಕೋರರಾಗಿ ಶ್ರಮಿತ ವರ್ಗವನ್ನು ಕಡೆಗಣಿಸಿದಾಗ, ಉತ್ಪಾದನೆ ಹೆಚ್ಚಿಸಿದ ಕಾರ್ಮಿಕರು ಶ್ರಮಕ್ಕೆ ತಕ್ಕ ಪ್ರತಿಫಲ ಪಡೆಯಲು ಸಂಘಟಿತರಾಗಿ ತಮ್ಮ ಹಕ್ಕು ಪಡೆಯಲು ಹೋರಾಟದ ಕಣಕ್ಕಿಳಿಯುವುದು ಅನಿವಾರ್ಯವಾಗುತ್ತದೆ. ಕಾರ್ಮಿಕರ ಇಂಥ ಒಂದು ಸಂಘಟನೆ ಬಗ್ಗೆ ನಾನಿಲ್ಲಿ ಹೇಳಬೇಕಾಗಿದೆ. ಮೇ ೧ರ ಕಾರ್ಮಿಕ ದಿನಾಚರಣೆಯ ಬೃಹತ್ ಮೆರವಣಿಗೆಯನ್ನು ವಿಡಿಯೋ ಪ್ರದರ್ಶನದಲ್ಲಿ ದಾವಣಗೆರೆ 'ಕ್ರಾಂತಿದೂತ' ಪತ್ರಿಕಾ ಕಛೇರಿಯ ಮೇಲಿನ ಕೋಣೆಯಲ್ಲಿ ವೀಕ್ಷಿಸಿ ವಿಸ್ಮಯಗೊಂಡೆ. ಇಡೀ ಜಿಲ್ಲೆಯಿಂದ ಬಂದು ಮೇಳೈಸಿದ್ದ ಕೆಂಪು ಬಟ್ಟೆಗಳ ಸಾವಿರ–ಸಾವಿರ ಕಾರ್ಮಿಕರು ದಾವಣಗೆರೆ ಬೀದಿಗಳಲ್ಲಿ ಶಿಸ್ತಿನ ಸಿಪಾಯಿಗಳಂತೆ ನಡೆಯುತ್ತಿದುದು ಜನತೆಯ ಮನ–ಮನೆಗಳಲ್ಲಿ ಡಂಗೂರ ಹೊಡೆಯುವಂತಿತ್ತು. ಬಹುತೇಕ ರಸ್ತೆಗಳಲ್ಲಿ ತಂಪು ಕೊಡುವ ಮರಗಳು ಈ ಕಾರ್ಮಿಕರ ಸಂಘಟನೆಯ ಮೂಲಪಕ್ಷವೊಂದರಿಂದ ಬೆಳೆದು ನಿಂತವುಗಳೆಂಬುದನ್ನು ಯಾರೂ ಮರೆಯುವಂತಿಲ್ಲ.

o o o o o

ನೆಲಕ್ಕೆ ಮಳೆ ಬಿದ್ದು ಹಸಿ ಮಣ್ಣಲ್ಲಿ ಸೃಷ್ಟಿಯಾಗುವ ಹೊಸದೊಂದು ಬದುಕಿಗೆ

ಹಾತೊರೆಯುವ ಬೀಜಗಳ ವೊಳಕೆ ಒಣಗಿ ಹೋಗುವ ಒಂದು ಸಂದರ್ಭದಲ್ಲಿ ನಾಕಂಡ ದೃಶ್ಯಗಳು ಮನಮಿಡಿವಂತಹವುಗಳು: 'ರೈತರು ವಿಷ ಕುಡಿಯುವ ಕಾಲ ಬಂದೀತು' ಎಂಬ ಮಾತು ನನ್ನ ಕಿವಿಯೊಳಗೆ ಬಿದ್ದಾಗ, ಹತ್ತಾರು ರೈತರು ನೆತ್ತಿಯಲ್ಲಿ ನಿಗಿನಿಗಿ ಉರಿಯುತ್ತಿದ್ದ ಸೂರ್ಯನ ಶಾಖದಲ್ಲಿ ಬೆವರನ್ನು ವಸ್ತ್ರಗಳಿಂದ ತಿಕ್ಕುತ್ತ ನಿಟ್ಟುಸಿರು ಬಿಟ್ಟಿದ್ದರು. ಆ ಸಂದರ್ಭದಲ್ಲಿ ಅವರು ಈ ರೀತಿ ಹೇಳಲು ಕಾರಣವಿತ್ತು. ಹೊಟ್ಟೆಗೆ ಅನ್ನ, ಮೈಗೆ ಬಟ್ಟೆ ಪಡೆಯಲು ತಾನು ಆಶ್ರಯಿಸಿದ್ದ ಬೆಳೆ ಹುಟ್ಟುವಾಗಲೇ ಕೈ ಕೊಟ್ಟಿತ್ತು. ಸೆಪ್ಟಂಬರ್ ತಿಂಗಳಲ್ಲೂ ಮಳೆಯಿಲ್ಲದೆ ಕಾದ ನೆಲ ತಕ ತಕ ಕುಣಿಯು ವಂತೆ ಮಾಡಿತ್ತು. ಧಗೆಯಿಂದ ಬಾಯಿ ಒಣಗಿ, ಹನಿನೀರಿಗೂ ಪರದಾಡುವಂತಾಗಿ, ದನಕರುಗಳಿಗೆ ಹಸಿರಿಲ್ಲದೆ, ಕೆರೆಕುಂಟೆಗಳೆಲ್ಲಾ ಬತ್ತಿ ಆಹಾಕಾರ ಎದ್ದಂಥ ಸಂದರ್ಭವದು.

ಹೊಲಗಳಲ್ಲಿ ಬಿತ್ತಿ, ಬೆಳೆದಿದ್ದ ಬೆಳೆಗಳು ಕರಟಿ ಹೋಗಿದ್ದವು. ಹಸಿರಾಗಿ ಕಣ್ಣಿಗೆ ತಂಪಾಗಿರಬೇಕಾದ ಹೊಲಗಳು ಅರೆ ಬೆಂದ ಜೀವಗಳಾಗಿದ್ದವು ಎಲ್ಲೊ ಬೆರಳೆಣಿಕೆ ಯಷ್ಟು ರೈತರು ಬ್ಯಾಂಕು ಸಾಲ ಮಾಡಿ ತೆಗೆಸಿದ್ದ ಬಾವಿಗಳಲ್ಲಿ (ಪಂಪ್‌ಸೆಟ್) ನೀರಿ ಲ್ಲದೆ ದಿನವೂ ಗೋಳು ಹುಯ್ದುಕೊಳ್ಳುವ ಪರಿಸ್ಥಿತಿ ನಿರ್ಮಾಣವಾಗಿತ್ತು.

ಕಾರ್ಖಾನೆಗಳಲ್ಲಿ ವಸ್ತುಗಳ ಉತ್ಪಾದನೆಯಲ್ಲಿ ಕಾರ್ಮಿಕನ ಶ್ರಮ ಇರುವಂತೆ. ಅನ್ನ ಕೊಡುವ ರೈತನದೂ ನೂರಾರು ತಾಪತ್ರಯಗಳು. 'ದೇಶದ ಬೆನೆಲುಬು ರೈತ' ಎಂಬ ಹಳಸಲು ಮಾತಿನಿಂದ ನನಗುಂತೂ ಸಿಟ್ಟಿದೆ. ಈಗ ಈತ ಬರೀ ಬೆನ್ನು ಎಲುಬು ಅಷ್ಟೇ. ಇದಕ್ಕೆ ನೂರಾರು ವರ್ಷಗಳ ಇತಿಹಾಸಕ್ಕಿಂತ ಪ್ರಸ್ತುತ ವ್ಯವಸ್ಥೆ ಕುರಿತು ಮಾತಾ ನಾಡೋಣ. ರಾಜಕೀಯದ ಭ್ರಷ್ಟರುಗಳು ಈತನ ಬದುಕಿನ ಬುಡಕ್ಕೇ ಕೊಡಲಿ ಹಾಕಿ ಬೇರೆಲ್ಲಾ ಸಮಸ್ಯೆಗಳಿಗೆ ಮಾತು ಹೊರಡದಂತೆ ಬೀಗ ಜಡಿದಿರುವುದು ಹೊಸ ಸುದ್ದಿಯೇನಲ್ಲ. ಕಾರ್ಮಿಕರಿಗಿರುವ ಸಂಘಟನೆ ಈ ವರ್ಗಕ್ಕಿಲ್ಲದೆ ಈ ರೈತ ಮೂಲೆ ಗುಂಪಾಗಿದ್ದ. ನಿದ್ದೆಗಣ್ಣಲ್ಲೇ ತೂಕಡಿಸುತ್ತಿದ್ದವನಿಗೆ ಈಗಿನ ಸಂಘಟನೆಯ ಮಹತ್ವ ಅರ್ಥವಾಗುತ್ತಿದೆ.

ಬದಲಾವಣೆಗೆ, ಹೊಸದಿಕ್ಕಿಗೆ, ಹೊಸನಾಡಿಗೆ ಬರಲು ಈಗೀಗ ಸಂಘಟಿತನಾಗುವ ರೈತ ವರ್ಗಕ್ಕೆ ಪ್ರಗತಿಪರ ವಿಚಾರಗಳಲ್ಲಿ ನಂಬಿಕೆಯಿರುವರೆಲ್ಲರೂ ಬೆಂಬಲ ಕೊಡೋಣ. ಆತನ ಕಷ್ಟ, ಕೋಟಲೆಗಳಿಗೆ ನಾವೆಲ್ಲಾ ಸ್ಪಂದಿಸೋಣ. ಯಾವುದೇ ಸಂಘಟನೆಗ ಳನ್ನು ಬೆಳೆಯದಂತೆ ಚಿವುಟಿ ಹಾಕಲು ಪ್ರಯತ್ನಿಸುವವರನ್ನು, ಟೀಕೆಗಳಿಂದಲೇ ತಮ್ಮ ಬೇಳೆ ಬೆಯಿಸಿಕೊಳ್ಳುತ್ತಿರುವವರನ್ನು ತಿದ್ದಿ ಸಂಘಟನೆಗೆ ಹೊಡೆತ ತರದಂತೆ ಎಚ್ಚರಿಕೆ ವಹಿಸೋಣ.

ಈ ಎಲ್ಲಾ ವಿಚಾರಗಳಿಗೂ ಸೃಷ್ಟಿ ಕ್ರಿಯೆ ಬಹು ಮುಖ್ಯವಾಗುತ್ತದೆ. ಸೃಷ್ಟಿ ಕ್ರಿಯೆ ಏನು? ಹೇಗೆ?ಎಂದು ನಾವೆಲ್ಲ ಯೋಚಿಸಿ, ದಿಕ್ಕುಗಳು ಒಂದು ಕೇಂದ್ರ ಬಿಂದುವಿ ನಿಂದ ತಮ್ಮ ಮಾರ್ಗ ಸೂಚಿಸಿಕೊಳ್ಳುವಂತೆ ಮಾಡುವಲ್ಲಿ ಎಲ್ಲರ ಜವಾಬ್ದಾರಿ ಇದ್ದೇ ಇದೆ ಎಂದುಕೊಂಡಿದ್ದೇನೆ. ಅದಕ್ಕಾಗಿ ನಾವೆಲ್ಲ ಅಕ್ಟೋಬರ್ ೮ ರಂದು ರಾಜಧಾನಿ ಯಲ್ಲಿ ಕಂಡ ಲಕ್ಷಾಂತರ ರೈತರ ಬದುಕು–ಬವಣೆ ಬಗ್ಗೆ ಚಿಂತಿಸೋಣ. ಹಸಿರನ್ನು ಮನಸ್ಸಲ್ಲಿ ಸೃಷ್ಟಿಸಿಕೊಂಡು ಹೊಸ ನಾಡು ಕಟ್ಟಲು ಸಿದ್ಧರಾದ ರೈತರಿಗೆ ಬೆಂಬಲ ಕೊಡೋಣ.

—ಆರ್. ಜಿ. ಹಳ್ಳಿ ನಾಗರಾಜ್

ಕತೆ

# ಪಿಂಡ

○ ಜಾಣಗೆರೆ ವೆಂಕಟರಾಮಯ್ಯ

'ಊರಿಗೆ ಬಂದುಹೋಗು' ಎಂದು ಐದಾರು ಬಾರಿ ಅಣ್ಣ ಹೇಳಿ ಕಳಿಸಿದ್ದರೂ ನಾನು ಹೋಗಲು ಮನಸ್ಸೇ ಮಾಡಿರಲಿಲ್ಲ. ಅದಕ್ಕೂ ಮೇಲಾಗಿ ನಾನು ಊರಿಗೆ ಹೋಗಿ ಕಡಿದು ಕಟ್ಟೆಹಾಕುವುದಾದರೂ ಏನನ್ನ, ನನ್ನ ಮಾತನ್ನು ಯಾರು ಕೇಳಾರು ಎಂಬ ಚಿಂತೆಯೂ ಮನಸ್ಸನ್ನು ಕಾಡಿತ್ತು. ಆದರೆ ಈ ಬಾರಿ ಅಣ್ಣ ಮನೆಯ ವಿಷಯವನ್ನೆಲ್ಲಾ ಬಿಡಿಸಿ ಹೇಳಿ ಬರಲೇಬೇಕು, ಇಲ್ಲದಿದ್ರೆ ಸರಿಹೋಗಲ್ಲ ಎಂದು ಹೇಳಿ ಹೋದಾಗ ನಾನು ಅನಿವಾರ್ಯವೆನಿಸಿ ಹೊರಟು ನಿಂತೆ.

ನನ್ನವಳು 'ನೀವು ಹೋಗಿ ಅಲ್ಲೇನು ಸಾಧಿಸ್ಬೇಕು?' ಎಂದು ಕೊಸರು ಹಾಕಿದಾಗ, ನಮ್ಮೊಳಗಿನ ನೋವು, ನಮ್ಮನೆಯೊಳಗಿನ ಬೇಗೆಗಳು ಆಕೆಗೆ ಹೇಗೆ ಗೊತ್ತಾದೀತು? ಎಂದುಕೊಂಡು 'ಇಲ್ಲಿ, ಮನೇಲಿ ತೀರಾ ಅಧ್ವಾನವಾಗಿದೆ. ಏನಾರ ತೀರ್ಮಾನ ಮಾಡಿ ಬರಬೇಕು' ಎಂದು ಹೊರಟೆ.

ಬಸ್ಸು ಹಿಡಿದು ಕೂತೆ. ಈ ಬದುಕು ಎಷ್ಟೊಂದು ಹಿಂಸೆ, ಕಾಟ, ಅಡ್ಡಿ, ಆತಂಕಗಳನ್ನು ಕಾಣಬೇಕಿದೆ? ಎಷ್ಟೊಂದು ಕಂದಕಗಳನ್ನು ದಾಟಿ ಅಸ್ತಿತ್ವ ಉಳಿಸಿಕೊಳ್ಳಬೇಕಿದೆ? ಎಷ್ಟೊಂದು ನೋವು, ನಲಿವುಗಳಲ್ಲಿ ತೇಲಿ, ಮುಳುಗಿ ಉಳಿಯಲು ಹೆಣಗಾಡಬೇಕಿದೆ? ಎಂದು ಮನಸ್ಸು ಒಂದು ಕ್ಷಣ ಯೋಚಿಸಿದಾಗ ಮೈಯಾರ ಮೈಯೆಲ್ಲಾ ಗಡಗಡನೆಂದು ನಡುಗತೊಡಗಿತು.

ಬಸ್ಸು ಚಲಿಸಿತು. ಬಹುಶಃ ಅಪ್ಪ ಇವತ್ತಿಗೂ ಬದುಕಿದ್ದರೆ ಏನಾಗುತ್ತಿತ್ತೋ? ಇದೇ ಸ್ಥಿತಿಗಳನ್ನು ಆತನೂ ಕಂಡು ಕೂಗಾಡಬೇಕಿತ್ತೋ, ಇಲ್ಲವೇ ಎಲ್ಲವನ್ನು ಸರಿಪಡಿಸಿಕೊಂಡು ಹೋಗುವ ವ್ಯವಹಾರ ಮಾಡುತ್ತಿದ್ದನೋ ಏನೋ? ಅಂತೂ ಈಗ ವಾತಾವರಣ ತೀರಾ ಹದಗೆಟ್ಟಿತ್ತು. ಅದನ್ನೆಲ್ಲಾ ಅಣ್ಣ ಒಂದುರೀತೀಲಿ ತನ್ನ ತಲೇ

---

**ಬದುಕು ಎಷ್ಟೊಂದು ಹಿಂಸೆ, ಕಾಟ, ಅಡ್ಡಿ, ಅತಂಕಗಳನ್ನು ಕಾಣಬೇಕಿದೆ ? ಎಷ್ಟೊಂದು ಕಂದಕಗಳನ್ನು ದಾಟಿ ಅಸ್ತಿತ್ವ ಉಳಿಸಿಕೊಳ್ಳಬೇಕಿದೆ ?**

---

ಮೇಲೆ ಹಾಕಿಕೊಳ್ಳಬೇಕಿತ್ತು.

ಹನ್ನೊಂದು ಮಕ್ಕಳನ್ನು ಪಡೆದಿದ್ದ ಅಪ್ಪನಿಗೆ ಮಕ್ಕಳ ಬಗ್ಗೆ ಎಂದೂ ಕಸಿವಿಸಿಯಾಗಿರಲಿಲ್ಲ. ಅವರೆಂದರೆ ಪ್ರಾಣ ಬಿಟ್ಟುಕೊಳ್ಳುತ್ತಿದ್ದ. ಯಾರಾದರೂ 'ಇದೇನ್ ಯೆಂಕ್ಟಪ್ಪಾ. ಈಸೊಂದು ಮಕ್ಳು?' ಅಂದರೆ 'ಇರ್ಲಿ ಬಿಡು, ಇವತ್ತು ಅನ್ನದ್ ಮಕ್ಳು ನಾಳೆ ಚಿನ್ನದ್ ಮಕ್ಳು' ಎಂಬ ಮಾತನ್ನೂ ಒದರಿಕೊಳ್ಳುತ್ತಿದ್ದ. ಇದ್ದ ಕೇವಲ ಐದಾರು ಎಕರೆ ಹೊಲವಲ್ಲಿಯೇ ದುಡಿದು ಅಷ್ಟೂ ಜನರನ್ನ ಸಾಕಬೇಕಿತ್ತು. ಹೊತ್ತಾರೆಯಿಂದ ಸಂಜೆವರೆಗೂ ತಾನೇ ಅಲ್ಲಿ ದುಡೀಬೇಕು. ಮೊದಲೆರಡು ಮಕ್ಕಳು ಹೆಣ್ಣೇ ಆಗಿದ್ದರಿಂದ ಅವರಿಬ್ಬರೂ ಮದುವೆಯಾಗಿ ಗಂಡನ ಮನೆಗೆ ಹೋಗೋವರೆಗೆ ದಿನಾ ಕೂಲಿ ಮಾಡಿ ಅಪ್ಪನಿಗೆ ನೆರವಾಗಿದ್ದರು. ಆಮೇಲೆ ಅಪ್ಪನಿಗೆ ಒಂದಿಷ್ಟು ಕಷ್ಟವಾಗಿತ್ತು.

ಹೊಟ್ಟೆಗಂತೂ ದಿನಾ ಏನಾದರೂ ಸಿಗುತ್ತೆ ಎಂಬ ಗ್ಯಾರಂಟಿಯಿರಲಿಲ್ಲ. ರಾಗಿ ಮುದ್ದೆ, ಅನ್ನ ಸಿಕ್ಕ ದಿನ ನಮಗೆ ಒಂದು ರೀತಿಯ ಹಬ್ಬವೇ. ಯಾಕೆಂದರೆ ಸಾಮಾನ್ಯವಾಗಿ ದಿನಾ ಕುಡಿಯುತ್ತಿದ್ದದು ರಾಗಿ ಅಂಬಲಿ, ಇಲ್ಲವೇ ಅಕ್ಕಿ ಅಂಬಲಿ. ನಾವಂತೂ ಅದನ್ನ ಜೀವಕ್ಕಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದೆವು. ಒಂದೊಂದು ದಿನ ಅದೂ ಸಿಗದೆ ಬರೀ ನೀರು ಕುಡಿದೇ ಮಲಗಬೇಕಿತ್ತು.

ಆಗ ನಾಲ್ಕನೇ ಕ್ಲಾಸಿನಲ್ಲಿ ನಾನು ಓದುತ್ತಿದ್ದೆ. ಸಂತೆಯ ದಿನ ಸ್ಕೂಲಿಗೆ ರಜೆ ಕೊಡುತ್ತಿದ್ದರಿಂದ ಅಪ್ಪ ನನ್ನನ್ನೂ ಸಂತೆಗೆ ಕರೆದೊಯ್ದ. ಅದೇ ಮೊದಲ ಸಾರಿ ನಾನು ಪಟ್ಟಣಕ್ಕೆ ಹೋಗಿದ್ದು. ಅವತ್ತು ರಾಗೀನ ತರಬೇಕಾಗಿದ್ದು ಸಹಾಯಕ್ಕೆ ನಾನೂ ಹೋಗಿದ್ದೆ. ಅಂಗಡಿ ಮುಂಗಟ್ಟು, ಜನಜಾತ್ರೆ ಎಲ್ಲವನ್ನೂ ನೋಡುತ್ತಾ ಹೊಸ ಪ್ರಪಂಚ ಕಂಡ ಸುಖವನ್ನನುಭವಿಸುತ್ತಿದ್ದೆ.

ಮಧ್ಯಾಹ್ನದವರೆಗೂ ಅಪ್ಪ ಏನನ್ನೂ ಕೊಳ್ಳಲಿಲ್ಲ. ಕಾಸು ಇತ್ತೋ ಇಲ್ಲವೋ ಎಂಬುದನ್ನು ನಾನು ಲೆಕ್ಕ ಹಾಕಿರಲಿಲ್ಲ. ಆದರೆ ಒಂದಂತೂ ಗೊತ್ತಿತ್ತು. ಆ ವಾರದಲ್ಲಿ ನನ್ನ ಅಕ್ಕಂದಿರು ಮಾಡಿದ್ದ ಕೂಲಿಯ ದುಡ್ಡನ್ನು ಸಂತೇಲಿ ಮೇಸ್ತ್ರಿ ಕೊಡುತ್ತೇನೆಂದು ಹೇಳಿದ್ದ. ಆತ ಅಲ್ಲೀವರೆಗೂ ಸಿಕ್ಕಿರಲಿಲ್ಲ. ಅಪ್ಪನಂತೂ ನನ್ನನ್ನ ಮರವೊಂದರ ಕೆಳಗೆ ಕೂರಿಸಿ ಹತ್ತಾರು ಬಾರಿ ಇಡೀ ಸಂತೇನೆಲ್ಲಾ ಸುತ್ತಾಡಿ ಸುಸ್ತಾದವನಂತೆ ಬಂದು 'ಉಸ್ಸಪ್ಪಾ' ಎಂದು ಕೂರುತ್ತಿದ್ದ. ನನ್ನ ಹೊಟ್ಟೆ ಬೇರೆ ತಾಳ ಹಾಕುತ್ತಿತ್ತು. ಹಸಿವಿನಿಂದ ಇನ್ನೇನು ಅತ್ತೇಬಿಡಬೇಕು ಎಂದುಕೊಂಡಿದ್ದೆ. ಆದರೆ ಅಪ್ಪ ಕೂಡ ಹೊತ್ತಾರೆಯಿಂದ ಕಾಸಿಲ್ಲದೆ ಒಂದು ಬೀಡಿಯನ್ನೂ ಸೇದದಿದ್ದನ್ನ ಗಮನಿಸಿದ್ದರಿಂದ ಹಲ್ಲು ಹಿಡಿದು ಕೂತಿದ್ದೆ.

ಅಷ್ಟರಲ್ಲಿ ಅಲ್ಲಿಗೇ ಮೇಸ್ತ್ರಿ ಬಂದದು ಕಂಡು ಇಬ್ಬರಿಗೂ ಹೋಗಿದ್ದ ಜೀವ ಬಂದಂತಾಗಿತ್ತು. ಇಬ್ಬರು ಅಕ್ಕಂದಿರ ವಾರದ ಕೂಲಿ ಹತ್ತು ರೂಪಾಯನ್ನ ಕೊಟ್ಟ. ಅಪ್ಪ ಬೇಡಿ ಮೇಲೆ ಎಂಟಾಣೆ ಚಿಲ್ಲರೆಯನ್ನು ಈಸಿಕೊಂಡ. ಅದರಲ್ಲಿ ನನಗೆ ಎರಡಾಣೆಗೆ

ಪಕೋಡ. ಉಳಿವಿದ್ದಕ್ಕೆ ಬೀಡಿ ತಗೊಂಡು ಬಂದು ಮರದ ಕೆಳಗೆ ಸೇದುತ್ತಾ ಕೂತ ಅಪ್ಪ ನಾನು ಪಕೋಡ ತಿನ್ನುತ್ತಿದ್ದನ್ನ ಕಂಡು ಖುಷಿಪಟ್ಟಿದ್ದ.

ಸಾಯಂಕಾಲವಾದರೂ ಅಪ್ಪ ಏನನ್ನೂ ಕೊಂಡೇ ಇರಲಿಲ್ಲ. ಸುಮ್ಮನೆ ಅಲ್ಲಿ ಇಲ್ಲಿ ಹೋಗಿ ಬೆಲೆ ಕೇಳಿಕೊಂಡು ಬರುತ್ತಿದ್ದ ಅಷ್ಟೆ. ಕತ್ತಲಾಗುವ ಹೊತ್ತಿಗೆ ಮನೆಗೆ ಹೋಗುವ ಆತುರದಲ್ಲಿ ವ್ಯಾಪರಸ್ಥರು ಕಡಿಮೆ ಬೆಲೆಗೆ ಮಾರಿ ಹೋಗುತ್ತಾರೆಂದು ಅಪ್ಪನಿಗೆ ಚೆನ್ನಾಗಿ ಗೊತ್ತು. ಒಂದೆರಡು ಸೇರು ರಾಗಿ ಜಾಸ್ತಿ ಬಂದರೆ ಒಂದು ದಿನದ ಯಾಚ್ಕೆ ತೀರುತ್ತೆಂದು ಅಪ್ಪನ ಕನಸು.

ಎಲ್ಲೋ ಹೋಗಿದ್ದ ಅಪ್ಪ ಬಳಲುತ್ತಾ ಬಂದು ಕುಸಿದು ನನ್ನ ಪಕ್ಕದಲ್ಲಿ ಬಿದ್ದಾಗ ನನಗೆ ಅಳು ಬಂತು. 'ಯಾಕಪ್ಪಾ, ಏನಾಯ್ತು?' ಅಂದೆ. ಅಪ್ಪ ಕಣ್ಣಲ್ಲಿ ನೀರಾಕುತ್ತಲೇ ತನ್ನ ಎಡ ಕಂಕುಳ ಕೆಳಗೆ ಇಳಿಬಿದ್ದ ಜೇಬು ಕತ್ತರಿಸಿ ಹೋಗಿದ್ದನ್ನು ತೋರಿಸಿದ. ನನಗದು ಅರ್ಥವಾಗಿತ್ತು. ಅಷ್ಟರಲ್ಲಾಗಲೇ ಕತ್ತಲಾವರಿಸುತ್ತಿತ್ತು. ಅಪ್ಪ ತಲೆ ಮೇಲೆ ಕೈ ಹೊತ್ತು ಕೂತ. ನಾನು ಸುಮ್ಮನೆ ಅಳುತ್ತಿದ್ದೆ. ಆಗಲೇ ಜನ ಖಾಲಿಯಾಗಿದ್ದರು. ಬಹಳ ಹೊತ್ತಿನ ಮೇಲೆ ಅಪ್ಪನನ್ನ ಎಬ್ಬಿಸಿಕೊಂಡು ಹೊರಟೆ. ಅಪ್ಪನ ಕಾಲುಗಳು ಹಿಂದೆ ಹಿಂದಕ್ಕೆ ಎಳೆಯುತ್ತಿದ್ದವು.

ಊರು ತಲುಪಿದಾಗ ಎಂಟು ಗಂಟೆ ಮೀರಿತ್ತು. ನಡುವೆ 'ಮರಿ, ಹುಡುಗ್ರಿಗೆ ಕಳ್ಳೇಪುರೀನೂ ಇಲ್ಲಂಗಾಯ್ತಲ್ಲಪ್ಪ' ಎಂದು ಅಪ್ಪಾ ಕಣ್ಣೀರು ಹಾಕುತ್ತಲೇ ಇದ್ದ. ಅಂತೂ ಅವತ್ತು ಮನೇಲೆಲ್ಲಾ ಉಪವಾಸವಾಯಿತು. ನನ್ನನ್ನೂ ಕಾದಿದ್ದ ಅವ್ವ ಎಲ್ಲರಿಗೂ ನೀರು ಕುಡಿಸಿ ತಾನೂ ಕುಡಿದು ಮಲಗಿದಳು.

o o o o o

ಬಸ್ಸಿಂದ ಇಳಿದೆ. ಮೂರು ಮೈಲಿ ದೂರ ನಡೀಬೇಕಿತ್ತು. ಬಿಸಿಲು ಚುರು ಗುಡುತಿತ್ತು. ಬಾಯಾರಿ ಗಂಟಲು ಒಣಗುತ್ತಿತ್ತು. ಹೊಟ್ಟೆ ಕರಕರ ಅನ್ನುತ್ತಿತ್ತು. ಆದರೂ ಆದರಲ್ಲೇ ಊರು ತಲುಪುವ ಪ್ರಯತ್ನ ಮಾಡಿದೆ.

ಅಪ್ಪ ನಮಗಾಗಿ ಒದ್ದಾಡಿದ್ದು ಅಷ್ಟಿಷ್ಟಲ್ಲ. ಮಕ್ಳು ಜಾಸ್ತಿ. ಇರೋ ಆಸ್ತಿ ಪುಟುಗೋಸಿ ಅಗಲ. ಎಲ್ಲಾರಿಗೂ ಎಲ್ಲಾದೀತು? ಅದಕ್ಕೇ ಒಂದಷ್ಟು ಮಕ್ಳುನ್ನ ಓದಿ ಸೋಣ ಎಂಬ ದೊಡ್ಡಾಸೆ ಹೊತ್ತೋನು. ಎಲ್ಲಾ ಮಕ್ಕಳನ್ನೂ ಸ್ಕೂಲಿಗೆ ಕಳಿಸಲು ಪ್ರಯತ್ನಿಸಿದ್ದ. ಆದರೆ ಹಾಗೆ ಓದಿ ಕಲಿತೋರು ನಾಕೈದು ಜನ ಮಾತ್ರ. ದಿನಾ ಹೊತ್ತಾರೆ ನಾಕು ಗಂಟೆಗೇ ಎದ್ದು ನಮ್ಮನ್ನೂ ಎಬ್ಬಿಸಿ ಅಪ್ಪ ಪಾಠ ಹೇಳಿಕೊಡು ತ್ತಿದ್ದ. ಒಂದು ದಿನ ಸ್ಕೂಲಿಗೆ ಚಕ್ಕರ್ ಹಾಕಿದರೆ ಬಾರುಗೋಲಲ್ಲೇ ಬಾರಿಸುತ್ತಿದ್ದ. ಊಟ ಹಾಕುತ್ತಿರಲಿಲ್ಲ. ಬಿಸಿಲು ಮಳೆಯಲ್ಲಿ ಹೊರಗೆ ನಿಲ್ಲಿಸುತಿದ್ದ. ಅಂಥಾ ಕಟ್ಟು

---

**ನಮ್ಮ ಓದಿಗಾಗಿ ಹೊಟ್ಟೆ, ಬಟ್ಟೆಗಾಗಿ ಇದ್ದ ಆಸ್ತೀನ ಹತ್ತಾರು ಬಾರಿ ಭೋಗ್ಯ ಮಾಡಿದ್ದರೂ ಯಾವುದನ್ನೂ ಕೊನೆವರೆಗೂ ಅಪ್ಪ ಕಳೆಯದಂತೆ ನೋಡಿಕೊಂಡಿದ್ದ.**

---

ನಿಟ್ಟಾದ ಅಪ್ಪನೆಲ್ಲಿ ನಾವೆಲ್ಲಿ ? ಏನೇನೋ ವಿಚಾರಗಳನ್ನೆಲ್ಲಾ ತಲೆಗೆ ತುಂಬಿಕೊಂಡು ದೊಡ್ಡ ಪ್ರಭೃತಿಗಳಂತೆ ನಾಟಕವಾಡುವ ನಾವು ಮುಗ್ಧ ಮನಸ್ಸಿನ ಅಪ್ಪನ ಮುಂದೆ ತೀರಾ ಸಣ್ಣವರು ಅಂತ ಈಗ ಹೊಳೆಯುತ್ತಿದೆ. ನಮ್ಮ ಓದಿಗಾಗಿ, ಹೊಟ್ಟೆ ಬಟ್ಟೆಗಾಗಿ ಇದ್ದ ಆಸ್ತೀನ ಹತ್ತಾರು ಬಾರಿ ಭೋಗ್ಯ ಮಾಡಿದ್ದರೂ ಯಾವುದನ್ನೂ ಕೊನೆವರೆಗೂ ಅಪ್ಪ ಕಳೆಯದಂತೆ ನೋಡಿಕೊಂಡಿದ್ದ. ಆದರೆ ಅಪ್ಪ ಹೋದ ಮೇಲೆ ನಾವು ಘಟಾನುಘಟಿಗಳೆನಿಸಿಕೊಂಡಿದ್ದರೂ ಒಂದು ಚೂರು 'ಭೂಮೀನ ಸಂಪಾದಿಸಿಸೋಕೆ ಆಗಲಿಲ್ಲ. ಅದಿರಲಿ, ಅಪ್ಪನ ಆಸ್ತಿಯನ್ನೇ ಸರಿಯಾಗಿ ಉಳಿಸಿಕೊಳ್ಳಲಾಗಲಿಲ್ಲ. ಅಂಥಾ ಆಸ್ತೀಗೆ ಇವತ್ತು ಪೈಪೋಟಿಯಿಂದ ಎಲ್ಲರೂ ನಿಂತಿದ್ದರು.

ಅಪ್ಪ ಸತ್ತು ಐದು ವರ್ಷ ಕೂಡ ಆಗಿಲ್ಲ. ಆಗಲೇ ಅವನ ಆಸ್ತೀನ ಹರಿದು ಹಂಚಿಕೊಳ್ಳಲು ಹಾತೊರೆದು ನಿಂತ ನಮ್ಮ ವ್ಯಕ್ತಿತ್ವಗಳನ್ನು ಕಂಡು ಒಳಗೊಳಗೇ ಹೇಸಿಗೆಯೆನಿಸಿತು. ಅದರಲ್ಲೂ ಕಳೆದ ವರ್ಷತಾನೆ ಮದುವೆಯಾಗಿದ್ದ ಒಬ್ಬ ತಮ್ಮ ಹೆಂಡತಿ ಪಕ್ಕಕ್ಕೆ ಬಂದ ಆರು ತಿಂಗಳಲ್ಲೇ ತಲೆ ತಿರುಗಾಡಿಸಿಕೊಂಡಿದ್ದ. ಅವನಿಗೆ ಪ್ರತ್ಯೇಕ ಸಂಸಾರ ಹೂಡುವ ಚಪಲ ಬಂದಿತ್ತು. ತನ್ನಿಂದಲೇ ಈ ಮನೇಲೆಲ್ಲಾ ಕೂತು ತಿನ್ನುತ್ತಾರೆಂಬ ಅಹಂ ಅವನಿಗೆ ಬಂದಿತ್ತು. ತನ್ನಿಂದಲೇ ಈ ಮನೆ ದೀಪ ಉರಿಯುತ್ತಿದೆಯೆಂಬ ಭ್ರಮೆಯೂ ಅವನನ್ನು ಮುತ್ತಿತ್ತು. ಇದಕ್ಕೆ ಏನು ಹೇಳಲಿ ? ಆ ತಮ್ಮನಿಗೂ ನನಗೂ ಪರಸ್ಪರ ಹೆಚ್ಚಿನ ತಿಳುವಳಿಕೆಯಿತ್ತು. ನನ್ನ ಮಾತನ್ನು ಕಿತ್ತು ಹಾಕುತ್ತಿರಲಿಲ್ಲ. ಏನೂ ಬೇಕಾದರೂ ನನ್ನ ಬಳಿಯೇ ಬಂದುಹೋಗುತ್ತಿದ್ದ. ಅಂಥವನು ಈ ವಿಷಯದಲ್ಲಿ ನನ್ನ ಮಾತನ್ನೂ ಒಗೆದು ಹಾಕಿದ್ದ.

ಮೊನ್ನೆ ಹಬ್ಬಕ್ಕೆ ಊರಿಗೆ ಹೋಗಿದ್ದಾಗಲೂ ತೋಟದಲ್ಲಿ ಕೂರಿಸಿಕೊಂಡು 'ಮರಿ, ಇದು ಒಳ್ಳೆದಲ್ಲ. ಯೋಚನೆ ಮಾಡು. ಬೇರೆ ಹೋಗಿ ಏನ್ಮಾಡ್ತಿಯಾ ? ಇನ್ನಾ ನಾಕು ದಿನ ಕಾಲ ಹಾಕು' ಎಂದಿದ್ದೆ. ಅದಕ್ಕೆ 'ನಾನು ಬಿಲ್‌ಕುಲ್ ಇರಲ್ಲ. ನಂಗೆ ಮನೇಲಿ ಇರ್ದಂಗೆ ಅವ್ಮಾನ ಮಾಡಿದ್ದಾರೆ. ನಾನು ಬ್ಯಾರೆ ಹೋಗೇ ಹೋಗ್ತಿನಿ' ಅಂದಿದ್ದ. 'ಲೇ ಹುಡ್ಗಾಟ ಆಡ್ಬೇಡ ಸುಮ್ಕಿರಲೇ.....ಬ್ಯಾರೆ ಅಂದ್ರೆ ತವಾಪೇನಾ.....?' ಎಂದಿದ್ದ ನಾನು ಅದನ್ನ ಅಷ್ಟು ಗಂಭೀರವಾಗಿ ತಗೊಂಡಿರಲಿಲ್ಲ. ಆದರೆ ಅವನೇ ಈಗ ನಮ್ಮ ಮನೆ ಮುಂದೆಯೇ ಒಂದು ವಪ್ಪಾರು ಹಾಕಿಕೊಂಡು ಸಂಸಾರ ಹೂಡಿದ್ದಾನೆಂದು ತಿಳಿದಾಗ ಆಕಾಶ ತಲೆವ್ಯಾಲೆ ಬಿದ್ದಂತಾಗಿತ್ತು.

o o o o o

ಮನೆ ಅಷ್ಟು ದೂರದಲ್ಲಿದ್ದಾಗಲೇ ತಮ್ಮನು ಹಾಕಿಕೊಂಡಿದ್ದ ವಪ್ಪಾರು ಮನೆ ಕಾಣಿಸಿತು. ಹೊಟ್ಟೆಯಲ್ಲಿ ತೊಳಸಿಕೊಂಡು ಬಂದಂತಾಯ್ತು. ಯಾರಾದರೂ ನೋಡಿ ಏನಂದಾರು ಎಂಬ ಅಳುಕು ನನ್ನ ಮನಸ್ಸಲ್ಲಿ ತುಂಬಿಕೊಂಡಿತು. ನನಗೇ ಇಷ್ಟು ವ್ಯಥೆಯಾಗುತ್ತಿರುವಾಗ ಅಪ್ಪಸತ್ತ ನಂತರ ಮನೆಯ ಎಲ್ಲಾ ಜವಾಬ್ದಾರೀನ ತಲೆ ಮೇಲೆ ಹೊತ್ತು ಸಾಕಿ ಸಲಹಿದ ಅಣ್ಣನಿಗೆ ಯಾವ ರೀತಿಯ ಮಾನಸಿಕ ಹಿಂಸೆಯಾಗಿರಬಹುದು

ಎಂದು ಆ ಕ್ಷಣ ಚಿಂತೆಗಿಟ್ಟುಕೊಂಡಿತ್ತು.

ಅಣ್ಣನು ಒಂದು ಬಗೆಯಲ್ಲಿ ವಿಚಿತ್ರ ಸ್ವಭಾವದವನು. ಆತ ಮತ್ತು ನಾನು ಉದ್ದಕ್ಕೂ ಜತೇಲೆ ಓದಿದ್ದರೂ ಎಲ್ಲೂ ಪ್ರೀತಿ ವಿಶ್ವಾಸಗಳನ್ನು ಹಂಚಿಕೊಂಡು ವ್ಯವಹರಿಸಲೇ ಇಲ್ಲ. ಆತ ಪೂರ್ವ, ನಾನು ಪಶ್ಚಿಮ ಎಂಬಂತಿದ್ದೊ ಬಹುಶಃ ಇದು. ನಾನು ಚಿಕ್ಕವನಾಗಿದ್ದಾಗ ಯಾವುದೋ ವಿಷಯಕ್ಕೆ ನನ್ನ ಕೆಳಗೆ ಹಾಕಿಕೊಂಡು ಚೆನ್ನಾಗಿ ತುಳಿದು ಹಾಕಿದ್ದ. ಆಗ ಊರೆಲ್ಲಾ ಕೇಳುವಂತೆ ಅಬ್ಬರಿಸಿದ್ದ ನನ್ನ ಕಿರುಚಾಟ ಕೇಳಿದ್ದ ಅಪ್ಪ ಉಳುತ್ತಿದ್ದ ಎತ್ತನ್ನು ಹೊಲದಲ್ಲೆ ಬಿಟ್ಟು ಓಡಿಬಂದು ಅಣ್ಣನನ್ನ ಅಟ್ಟಾಡಿಸಿಕೊಂಡು ಹೊಡೆದಿದ್ದ. ಅಂದಿನಿಂದ ಹುಟ್ಟಿಕೊಂಡು ಬಂದ ಅಂತರಂಗದ ದ್ವೇಷ (ರೋಷ) ಮೊನ್ನೆ ಮೊನ್ನೆಯವರೆಗೂ ಉಳಿದು ಬಂದಿತ್ತು. ಅಷ್ಟಲ್ಲದೆ ನನ್ನ ಮದುವೆಗೂ ಅಣ್ಣ ಅತಿಥಿಯಂತೆ ಬಂದು ಹೋಗಿದ್ದ. ಹಾಗಾಗಿದ್ದರಿಂದಲೇ ನಾನು ಅಣ್ಣನ ಪರವಲ್ಲ ಎಂದು ಎಲ್ಲರೂ ಭಾವಿಸಿದ್ದರು. ಆದರೆ ಮನೆಯನ್ನ ಪಾಲು ಮಾಡುವ ಸ್ಥಿತಿಗೆ ತಮ್ಮಂದಿರು ಬಂದಾಗ ಅದನ್ನು ಸಹಿಸದ ನಾನು ಅಣ್ಣನ ಪರ ನಿಂತಿದ್ದೆ.

ಅಣ್ಣನ ತ್ಯಾಗಾನ ಈ ಹುಡುಗರು ಅರ್ಥ ಮಾಡಿಕೊಳ್ಳಲಿಲ್ಲವಲ್ಲ ಎಂಬ ದುಃಖ ಒತ್ತರಿಸಿ ಬಂದಿತು. ಬೆಂಗಳೂರಿನಲ್ಲಿ ಆಫೀಸರಾಗಿದ್ದರೂ ಅಲ್ಲಿ ಮನೆ ಮಾಡದೆ ಹೆಂಡತಿ ಮಕ್ಕಳನ್ನು ಊರಲ್ಲಿ ಬಿಟ್ಟು ತಾನು ಎಲ್ಲೆಲ್ಲೋ ಮಲಗಿ, ಶನಿವಾರವಾಯಿತೆಂದರೆ ಊರಿಗೆ ಹೋಗಿ ಅಲ್ಲಿನ ವ್ಯವಹಾರ ನೋಡುತ್ತಿದ್ದ. ಹೆಂಡತೀನ ಯಾವುದೇ ರೀತಿಯಲ್ಲಿ ಇತರರ ಮೇಲೆ ದರ್ಬಾರು ಮಾಡಲು ಬಿಟ್ಟಿರಲಿಲ್ಲ. ಇರೋ ಇಬ್ಬರು ಮಕ್ಕಳು ಭಿಕ್ಷುಕರ ಹುಡುಗರಂತೆ ಅಲೆಯುತ್ತಿದ್ದೊ. ಹಾಗೆ ಅವರನ್ನು ಇಟ್ಟುಕೊಂಡಿದ್ದ ಅಣ್ಣ ತಮ್ಮಂದಿರನ್ನ ಚೆನ್ನಾಗಿಯೇ ನೋಡಿಕೊಂಡಿದ್ದ.

ತಮ್ಮನ ಹೊಸ ವಪ್ಪಾರು ಮನೆ ದಾಟಿ ನಮ್ಮ ಮನೆ ಮುಂದೆ ನಡೆದೆ. ಒಳಗೆ ತಲೆಮೇಲೆ ಕೈಹೊತ್ತು ಕೂತಿದ್ದ ಅವ್ವ ನನ್ನ ನೋಡಿದೊಡನೆ 'ಬಾರಪ್ಪಾ ಈಗ ಬಂದಾ? ಅಂದಳು. ನಾನು ಏನೂ ಅನ್ನಲಿಲ್ಲ, ಸುಮ್ಮನೆ ಹೋಗಿ ಕೂತೆ.

o o o o

ಸಂಜೆ ಹೊತ್ತಿಗೆ ತಮ್ಮನ ಹೊಸ ಬದುಕಿಗೆ ಸಹಾಯ ಮಾಡಿದ್ದವರ ಕತೆಯೆಲ್ಲಾ ಗೊತ್ತಾಯ್ತು. ಎದುರು ಮನೇಲಿದ್ದ ಸ್ವಂತ ಅಕ್ಕನೇ ಅವನಿಗೆ ಪಾತ್ರೆ ಸಾಮಾನು, ಚಾಪೆಗೀಪೆ ಎಲ್ಲಾನೂ ಕೊಟ್ಟಿದ್ದಳು. ಪಕ್ಕದ ಮನೆಯ ಚಿಕ್ಕಪ್ಪ ರಾಗಿ ಭತ್ತ, ದುಡ್ಡು ಗಿಡ್ಡು ಎಲ್ಲಾ ಕೊಟ್ಟಿದ್ದ. ಅಂದರೆ ಅವರೆಲ್ಲಾ ಆತನಿಗೆ ಒಂದು ರೀತೀಲಿ ಕುಮ್ಮಕ್ಕು ಕೊಟ್ಟಿದ್ದರು. ಹೋಗಿ ಒಬ್ಬೊಬ್ಬರನ್ನು ತರಿದು ಬಿಡಲೇ ಅನ್ನಿಸಿತು. ಅಕ್ಕ ಎಂದಾ

---

**ಅಪ್ಪನ ಪಿಂಡವನ್ನು ಇಷ್ಟಿಷ್ಟೇ ಹರಿದು ಹಂಚಿಕೊಂಡಿದ್ದ ತಮ್ಮಂದಿರ ಬಗ್ಗೆ ತುಂಬಾ ಅಸಹ್ಯವಾಗಿತ್ತು. ಊರು ಕೂಡ ಹಿಂಸೆಯಾಗತೊಡಗಿತ್ತು.**

---

ದರೂ ಇಂಥಾ ಹೇಸಿಗೆ ಕೆಲಸ ಮಾಡೋಳೇ ಎಂದುಕೊಂಡಿದ್ದು ಈಗ ನಿಜವಾಗಿತ್ತು. ಯಾವ ಸಂಸಾರವೂ ನೆಟ್ಟಗೆ ಕೆಲಸ ಕಾರ್ಯ ಮಾಡಿಸುವುದನ್ನು ಸಹಿಸದ ಚಿಕ್ಕಪ್ಪನ ಕೈ ಚಳಕವೂ ಅರ್ಥವಾಯಿತು. ಆ ಬೇವರ್ಸಿ ತನಗೆ ಬರಬೇಕಾಗಿದ್ದನ್ನು ತಗೊಂಡು ಹೋಗಿ ಬೇರೆ ಮನೆ ಮಾಡಿದ್ದರೆ ಅದೊಂದು ಬಗೆಯಿತ್ತು. ಆದರೆ ಅದಕ್ಕ ಮುಂಚೆ ಯೇ ಕಾಲು ತೆಗೆದು ಹೋಗಿದ್ದು ಭಾರೀ ನೋವು ತಂದಿತ್ತು.

ರಾತ್ರಿ ಪಾಲಿನ ತೀರ್ಮಾನಕ್ಕೆ ಕೂತೊ. ಆ ತಮ್ಮನನ್ನೂ ಕರೆಸಿದೊ. ನಾನು ಪ್ರಾರಂಭದಲ್ಲೇ ಬಾಯಿ ತೆಗೆದೆ. 'ಹೋಗೋನು ಹೋಗ್ಲಿ, ಇರೋನು ಇರ್ಲಿ. ಈಗ್ಲೇ ಯಾರಿಗೂ ಪಾಲು ಮಾಡೋದು ಬೇಡ. ನಮ್ಮ ಮಾನಾನೆಲ್ಲಾ ಹರಾಜು ಹಾಕಿದ್ದಾರೆ....' ಅಂದೆ. ಅದನ್ನ ಎಲ್ಲರೂ ಒಪ್ಪಿದಂತಿತ್ತು. ಆದರೆ ಮನೆವಾಳತನಕ್ಕೆ ಹೋಗಿದ್ದ ಎರಡನೇ ಅಣ್ಣ 'ಯಾಕೋ ಮರಿ, ಅವರವರ್ದು ಅವ್ರಿಗೆ ಕೊಟ್ಬಿಡಿ. ನಾಳೆ ಭಾಗಕ್ಕೆ ಬಂದು ಕೂತಾಗ ಸಾಲಪಾಲ ಹೊತ್ಕೊಳೋಕೆ ಬರ್ತ್ತಾರಾ? ಅವ್ಕೇ ಕೊಡೋದು ಕೊಟ್ಬು ಸಾಲ ಹೇರು....' ಅಂದ.

ಇದು ಎಲ್ಲರಿಗೂ ಸರಿ ಅನ್ನಿಸಿತು. ಅಣ್ಣ, ಇರೋ ಆಸ್ತಿ ಎಲ್ಲರಿಗಾಗಿ ಮಾಡಿದ್ದ ಸಾಲದ ವಿವರ ಹೇಳಿದ. ಎಲ್ಲರೂ ಸಾಲ ಹೊತ್ತುಕೊಳ್ಳುವಂತಿದ್ದರೆ ಎಲ್ಲ ಜಮೀನನ್ನೂ ಸಮವಾಗಿ ಹಂಚೋಣ. ಸಾಲ ಬೇಡ ಅನ್ನೋದಿದ್ರೆ ಅಪ್ಪನ ಆಸ್ತಿ ಮಾತ್ರ ಭಾಗ ಮಾಡ್ತೀನಿ ಎಂದು ಅಣ್ಣ ಹೇಳಿದ. ಅದಕ್ಕೆ ಬೇರೆ ಹೋಗಿದ್ದ ತಮ್ಮ ಕೂಗಾಡಿದ. ಅವನ ಕೂಗಾಟವನ್ನು ಸೇರಿದ್ದವರು ಒಪ್ಪಲಿಲ್ಲ.

ಅಪ್ಪ ಸತ್ತ ನಂತರ ಕೊಂಡಿದ್ದ ಭೂಮಿಯನ್ನ ಮಾತ್ರ ಅಣ್ಣ ಉಳಿಸಿಕೊಂಡ. ಅಪ್ಪನ ಆಸ್ತೀಲಿ ಏನೂ ಬೇಡ, ಸಾಲ ಪೂರ್ತಿ ನಾನೇ ಹೊತ್ತುಕೊಳ್ತೀನಿ ಅಂದ ಅಣ್ಣ. ಅದು ಎಲ್ಲರಿಗೂ ಒಪ್ಪಿಗೆಯಾಯ್ತು. ಆ ಸಾಲದ್ದೇ ದೊಡ್ಡ ಹೊರೆಯಾಗಿತ್ತು. ಅಪ್ಪನ ಆಸ್ತೀಲಿ ಉಳಿದ ಏಳು ಜನ ಗಂಡು ಮಕ್ಕಳಿಗೆ ಹಂಚಿದರು. ಅದರಲ್ಲಿ ಮನೆವಾಳತನಕ್ಕೆ ಹೋಗಿದ್ದ ಅಣ್ಣ ನನಗೇನೂ ಬೇಡಾಂದ. ನಾನು ಅವರು ಕೊಟ್ಟದ್ದನ್ನು ತಗೊಂಡೆ. ಆದರೆ ಸದ್ಯಕ್ಕೆ ಬೇರೆ ಯಾರೂ ಬೇರೆ ಸಂಸಾರ ಹೂಡುವುದಿಲ್ಲ ಅಂದರು. ಇನ್ನೂ ಮದುವೆಯಾಗುವ ತಮ್ಮಂದಿರು ಇಬ್ಬರಿದ್ರು.

ಇಪ್ಪರ ರಾಮಾಯಣ ರಾತ್ರಿಯೆಲ್ಲಾ ತಗೊಂಡಿತ್ತು. ಹೊತ್ತಾರೆಯೇ ಪಟ್ಟಣದಿಂದ ಛಾಪಾಕಾಗದ ತರಿಸಿ ಪತ್ರ ಬರೆದೊ. ಯ್ಯಾರ್ಯಾರಿಗೆ ಯಾವ್ಯಾವ ಪಾಲು ಎಂಬುದನ್ನೆಲ್ಲಾ ಪಾಲು ಮಾಡಿ ಬರೆದದ್ದಾಯ್ತು. ಅದಕ್ಕೆ ಎಲ್ಲರ ರುಜು ಕೂಡ ಹಾಕಿಸಿದೊ.

ಅಂತೂ ಮನಸ್ಸು, ಹೃದಯಗಳು ಛಿದ್ರಛಿದ್ರಗೊಂಡಿದ್ವೊ. ಅವನ್ನು ಜೋಡಿಸಲು ಯತ್ನಿಸಿದ್ದ ನನ್ನ ಹೃದಯವಂತೂ ಜರ್ಝರಿತಗೊಂಡಿತ್ತು.

ಮಧ್ಯಾಹ್ನದ ಹೊತ್ತು. ಫೆಬ್ರವರಿ ತಿಂಗಳು. ಮರ್‍ರ್‍ಂತ ಮಳೆ ಸುರಿಯತೊಡಗಿತ್ತು. ಯಾವತ್ತೂ ಇಂಥಾ ವಿಚಿತ್ರವನ್ನು ನಾನು ಕಂಡಿರಲಿಲ್ಲ. ಅಣ್ಣನಿಗೆ ಹೇಳಿದ.

'ನೋಡು, ಅಕಾಲದಲ್ಲಿ ಮಳೆ ಬೀಳ್ತಿದೆ. ಈ ಪಾಲೂ ಅಷ್ಟೇ. ನೀನು ತಮ್ಮಂದಿರನ್ನ ಹಕ್ಕಿಯಂತೆ ಹಾರಾಡಲು ಬಿಟ್ಟೆ. ಹದ್ದುಬಸ್ತಿನಲ್ಲಿದ್ರೆ ಇಷ್ಟೊಂದು ಮುಂದುವರಿಯುತ್ತಿರಲಿಲ್ಲ. ಇರ್ಲಿ ಬಿಡು. ನಿನ್ನ ಶ್ರಮ ಯಾವತ್ತೂ ದೊಡ್ಡದು. ಇಲ್ದಿದ್ರೆ ಇಷ್ಟೆಲ್ಲಾ ಇವತ್ತು ಬೀದೀಲಿ ಬಿದ್ದಿರ್ತಿದ್ದೊ.....' ಎಂದೆ.

ಅಪ್ಪನ ಪಿಂಡವನ್ನು ಇಷ್ಟಿಷ್ಟೇ ಹರಿದು ಹಂಚಿಕೊಂಡಿದ್ದ ತಮ್ಮಂದಿರ ಬಗ್ಗೆ ತುಂಬಾ ಅಸಹ್ಯವಾಗಿತ್ತು. ಊರು ಕೂಡ ಹಿಂಸೆಯಾಗತೊಡಗಿತ್ತು. ಬೇಗ ಅಲ್ಲಿಂದ ಕಾಲ್ತೆಗೆದರೆ ಸಾಕು ಅನ್ನಿಸಿತು. ಆದರೆ ಹಿಡಿದ ಮಳೆ ಬಿಟ್ಟೇ ಇರಲಿಲ್ಲ. ○

---

# ಮುಖಪುಟ ಕಲೆ



ಕೃಪೆ : ಚಿ. ಸು. ಕೃಷ್ಣಶೆಟ್ಟಿ

---

ವಿಳಾಸ : ಚಿ. ಸು. ಕೃಷ್ಣಶೆಟ್ಟಿ
ನಂ. 9ಸಿ, 10ನೇ ಮುಖ್ಯ ರಸ್ತೆ, 6ನೇ ಬಡಾವಣೆ,
ರಾಜಾಜಿನಗರ, ಬೆಂಗಳೂರು-560 010



ಮುಖಪುಟದ ‘ರೂಪಾಂತರ’ ಸರಣಿಯ ಕಲೆ ಚಿ. ಸು. ಕೃಷ್ಣಶೆಟ್ಟಿಯವರ ಕುಂಚದಿಂದ ಮೂಡಿದ್ದು. ಚಿ. ಸು. ಕೃಷ್ಣಶೆಟ್ಟಿಯವರ ಆಲೋಚನೆಗಳಿಗೆ, ಅಭಿವ್ಯಕ್ತಿಗೆ ಚೌಕಟ್ಟು ಹಾಕುವುದು ಹಗುರವಾದ ಕೆಲಸವಲ್ಲ ಎಂಬುದು ಇವರ ಕಲಾಕೃತಿಗಳನ್ನು ಗಮನಿಸಿದರೆ ಗೊತ್ತಾಗುತ್ತದೆ. ಇಂದಿನ ಎಷ್ಟೋ ಕಲಾವಿದರಂತೆ ಕ್ಯಾನ್ವಾಸಿನ ಮೇಲೆ ತಮ್ಮ ಆಲೋಚನೆಯ ಪದಗಳನ್ನು ಹಗಡಿಕೊಂಡುಬಿಡುವಷ್ಟಕ್ಕೇ ಸೀಮಿತವಾಗಿಬಿಡಬಹುದಾಗಿದ್ದ ಇವರ ಹಲವು ಕ್ರಿಯಾಶೀಲ ಮುಖಗಳು ಅರ್ಥವಾಗುವುದು ಸಂಘಟನೆಯ ಕಾರ್ಯಗಳಲ್ಲಿ.

“...ಸದ್ಯ ನಾನು ರಾಜಕೀಯವಾಗಿ ತಟಸ್ಥ” ಎಂದು ಹೇಳುವ ಕೃಷ್ಣಶೆಟ್ಟಿ ತಮ್ಮ ಕಾಲೇಜು ದಿನಗಳಿಂದಲೂ ವಿದ್ಯಾರ್ಥಿ ನಾಯಕರಾಗಿದ್ದರು. ತುರ್ತು ಪರಿಸ್ಥಿತಿಯ ಸಮಯದಲ್ಲಿ ೧೫ ತಿಂಗಳ ಕಾಲ ಮೀಸಾ ಆಜ್ಞೆಯಂತೆ ಬಂಧಿಖಾನೆಯಲ್ಲಿದ್ದ ಇವರ ಬಿಸಿ ತುಡಿತಗಳು, ಆಲೋಚನೆಗಳು ಕುಂಚದಿಂದಲೂ ಹೊರಬಿದ್ದಿವೆ.

ಕರ್ನಾಟಕ ಕಲಾಮೇಳದ ಕಾರ್ಯದರ್ಶಿಯಾಗಿ ದಾಕಹವಿಸ ಸಂಸ್ಥೆಯ ನಿರ್ದೇಶಕರಾಗಿ ‘ಸಮುಚ್ಚಯ’ದ ಸಂಚಾಲಕರಾಗಿ ಕರ್ನಾಟಕ ಲಲಿತಾ ಕಲಾ ಅಕಾಡೆಮಿಯ ಸದಸ್ಯರಾಗಿ ಪರಿಚಿತವಾಗಿರುವ ಕೃಷ್ಣಶೆಟ್ಟಿ ಸದ್ಯ ಕ್ಯಾರಿಯಾನ್ ಜಾಹಿರಾತು ಸಂಸ್ಥೆಯಲ್ಲಿ ಉದ್ಯೋಗಿಗಳಾಗಿದ್ದಾರೆ.

ಕರ್ನಾಟಕ ಕಲಾಯಾತ್ರೆಯ ಪ್ರಮುಖ ಕಲಾವಿದರಲ್ಲೊಬ್ಬರಾದ ಇವರು ಕಲಾ ವಿಮರ್ಶಕರೂ ಲೇಖಕರೂ ಆಗಿದ್ದಾರೆ. ‘ರೂಪಾಂತರ’ ಸರಣಿಯದ್ದೇ ಆದ ‘ಮೊನಾಲಿಸ’ದ ಮೂಲಕ ಹೆಚ್ಚು ಚರ್ಚಿತರಾದ ಈ ಕಲಾವಿದರ ಮತ್ತೊಂದು ಕಲಾಕೃತಿಯನ್ನು ಇಲ್ಲಿ ನೀಡುತ್ತಿದ್ದೇವೆ.

---

ಚಿತ್ರಕಲೆ ಕುರಿತು ‘ಅನ್ವೇಷಣೆ’ ಆಗಾಗ್ಗೆ ಚಿತ್ರ, ಲೇಖನ, ವಿಮರ್ಶೆಗಳನ್ನು ಪ್ರಕಟಿಸುವ ಉದ್ದೇಶ ಹೊಂದಿದೆ. ಸಾಹಿತ್ಯದ ಜತೆಗೇ ಕಲೆಯೂ ಸ್ಪಂದಿತವಾಗಬೇಕೆನ್ನುವುದು ನಮ್ಮ ಆಶಯ.

—ಸಂಪಾದಕ

# ಸಂಪಾದಕೀಯ

(ನಾಲ್ಕನೇ ಪುಟದಿಂದ ಮುಂದುವರೆದುದು)

ತುಕ್ಕು ಹಿಡಿದ ಮನಸ್ಸು-ಭಾವನೆಗಳಿಗೆ ಸಾಣೆ ಹಿಡಿಯುವ ಕೆಲಸ ತುರ್ತಾಗಿ ಆಗಬೇಕಿದೆ. ಮಾತು ಮತ್ತು ಭರವಸೆಗಳು ಏನನ್ನೂ ಸಾಧಿಸಲಾರವು. ಕಲ್ಪನೆಗಿಂತ ವಾಸ್ತವ ಮುಖ್ಯ. ಕನಸುಗಳಿಗಿಂತ ಸಾಧಿಸುವ ಗುರಿ ಮುಖ್ಯ.

ಯಾವುದೇ ಸಂದರ್ಭದಲ್ಲೂ 'ಅನ್ವೇಷಣೆ' ಬದುಕಬೇಕು; ಉಕ್ಕಿನಲ್ಲಿ ಹೂವ್ವರಳಿಸಿ ಬದುಕಬೇಕು. ಇಂಥ ಆಸೆ ನಮಗಂತೂ ಖಂಡಿತಾ ಇದೆ. ಆಕ್ಟೋಪಸ್‌ನ ಮುಂದೆ ಆಕಳಿಸುವ ಮೀನಾಗುವುದಿಲ್ಲ ನಾವು. ಆದರೂ ಬಲಿತ ಗಾಳಗಳನ್ನು, ಆ ಪಾಟಿ ಬಲೆಗಳನ್ನು, ಬಲೆ-ಗಾಳಗಳ ಬಲಗಳನ್ನು ಒತ್ತಡಗಳನ್ನು ಎದುರಿಸಲು ನಮ್ಮ ಜೊತೆಗೆ ನೀವು ಬೇಕು. ನಿಮ್ಮ ಸಹಕಾರ, ನಿಮ್ಮ ಹೃದಯ ಖಂಡಿತಾ ನಮಗೆ ಬೇಕು. ನಿಮ್ಮ ಮಾತು ಬೇಕು; ಮನಸ್ಸು ಬೇಕು. ಸಂವಾದಕ್ಕೆ ತೆರೆದ ಮನಸ್ಸಿರುವಾಗ ಅನಿಸಿಕೆಗಳ ವಿನಿಮಯ ಮಾಡಿಕೊಳ್ಳುವ ಸಹೃದಯರು ಬೇಕು.

ನಾವು ಯಾರನ್ನೂ ಹೀರಲಿಲ್ಲ; ಹೀಗಾಗಿ ಕೊಬ್ಬಲಿಲ್ಲ.<br>
ಯಾರನ್ನೂ ಸುಲಿಯಲಿಲ್ಲ; ಈ ಕಾರಣ ಬಲಿಯಲಿಲ್ಲ.

ಗುಪ್ತ ಕಾಲುವೆಗಳ ಬಾಯಿಗೂ ನಮ್ಮ ಜೇಬಿಗೂ ಅಷ್ಟುದ್ದ ಅಂತರ. ಏನು ಮಾಡುವುದು ? ಹೋರಾಟದ ಸಾಗರಕ್ಕೆ ನಮಗೂ ಪಯಣ ಬೆಳೆಸುವ ಆಸೆ ಆತುರ. ಹುಮ್ಮಸ್ಸಿನಿಂದ ಹೊರಟಿದ್ದೇವೆ; ಭಯವಾಗುತ್ತೆ ! ದಾರಿಯುದ್ದಕ್ಕೂ ಮುಳ್ಳುಗಳು, ಕಲ್ಲುಗಳು. ಹಾಗೆಂದು ನಾವಂತೂ ನಿರಾಶೆಯಾಗುವುದಿಲ್ಲ. ಖಂಡಿತ ಆಶಾವಾದಿಗಳು —ನಾವು.

ನವೆಂಬರ್ ೧೪, ೧೯೮೪ —**ಸಂಪಾದಕ**

---

ಬದುಕಿನ ಬಗೆಗಿನ ಅದಮ್ಯ ಉತ್ಸಾಹವೊಂದೇ ಸಾಲದೆನ್ನಿಸುವ ಹಂತದ ಬಗ್ಗೆ ನಾನು ಹೇಳುತ್ತಿದ್ದೇನೆ. ಉತ್ಸಾಹದ ಬೆನ್ನೇರಿ ಕುಳಿತವನ ಅನುಭವಕ್ಕೆ ಬರುವುದು ಕೇವಲ ಅವನ ಉತ್ಸಾಹವೇ ! ಕಣ್ಣಳವಿನಲ್ಲಿ ಮೂಡಿ ನಿಲ್ಲುವುದು ಆ ಗಳಿಗೆಯಲ್ಲಿ ಕ್ರಮಿಸುತ್ತಿದ್ದ ಹಾದಿಯ ನೆಲವೇ !

— **ಯಶವಂತ ಚಿತ್ತಾಲ**

---

# ಸಾಹಿತಿ—ಸಾಹಿತ್ಯ : ಸುದ್ದಿ

## ○ ಅರುಂಧ ತೇಜ

ದ್ಯಾವನೂರು ಮಹಾದೇವ ಕನ್ನಡದ ಶ್ರೇಷ್ಠ ಕತೆಗಾರ. ಈತ ಅಪರೂಪ ಕ್ಕೊಮ್ಮೆ ಕತೆ ಬರೆದರೂ ಅದು ಹೆಚ್ಚು ದಿನ ಚರ್ಚೆಗೆ ಒಳಗಾಗುತ್ತದೆ. ತನ್ನ ಸಮಾಜದ ನೋವನ್ನು. ಕ್ರೌರ್ಯವನ್ನು ಕತೆಗಳಲ್ಲಿ ಹಿಡಿದಿಡುವುದರಲ್ಲಿ ದ್ಯಾವನೂರು ಸಾಧಿಸಿರುವ ಸಿದ್ಧಿ ದಲಿತ ಪ್ರಜ್ಞೆಯಿಂದ ಮೂಡಿದ್ದೆಂಬುದನ್ನು ಮರೆಯುವಂತಿಲ್ಲ. ಈತ ಬರೆಯಲು ಪ್ರಾರಂಭಿಸಿದರೂ ಸುದ್ದಿಯಾಗುತ್ತದೆ. 'ಒಡಲಾಳ' (ನಾಟಕವಾಗಿಯೂ ಜನಪ್ರಿಯವಾದ ಕೃತಿ) ಪ್ರಕಟವಾಗಿ ನಾಲ್ಕು ವರ್ಷಗಳ ತರುವಾಯ ಜಾನಪದ ಶೈಲಿಯಲ್ಲಿ 'ಕುಸುಮಬಾಲೆ' ಎಂಬ ಕಥಾ ಕಾವ್ಯ ಬಂದಿರುವುದು ಸುದ್ದಿಯಾಗಿ;ಅಲ್ಲಲ್ಲೇ ಅದರ ವಸ್ತುವಿನ ಬಗ್ಗೆ ಭಾಷೆಯ ಬಗ್ಗೆ ಚರ್ಚೆಯಾಗುತ್ತಿದೆ. ಕನ್ನಡ ಸಾಹಿತ್ಯಲೋಕ ಸದ್ಯದಲ್ಲೇ ಉತ್ತಮ ಕೃತಿಯೊಂದನ್ನು ಎದುರು ನೋಡುತ್ತಿದೆ.

ಬೆಂಗಳೂರಿನ ಕನ್ನಡ ಸ್ನಾತಕೋತ್ತರ ಕೇಂದ್ರ ಹಲವು ಸಾಹಿತ್ಯ ಪ್ರಕಾರಗಳ ಸಾಹಿತ್ಯ ಸೃಷ್ಟಿಗೆ ಸುದ್ದಿ ಮಾಡಿದ್ದು; ಇಲ್ಲಿನ ಉಪನ್ಯಾಸಕರುಗಳು ವಿವಿಧ ಸಾಹಿತ್ಯ ಕ್ಷೇತ್ರದಲ್ಲಿ ಕೃಷಿಮಾಡುತ್ತಿರುವುದರ ಜೊತೆಗೆ ಹಲವು ಚಟುವಟಿಕೆಗಳಲ್ಲೂ ತೊಡಗಿರುವುದು ಹಳೆಯ ಸುದ್ದಿ.

o o o o o o

ಜಾನಪದ ಸೊಗಡನ್ನು, ಅದರ ವಿಶಿಷ್ಟತೆಯನ್ನು ತೋರಿಸಿರುವ ನಾಟಕಕಾರ, ಕವಿ, ಕಾದಂಬರಿಕಾರ ಡಾ॥ ಚಂದ್ರಶೇಖರ ಕಂಬಾರ ಈಗಾಗಲೇ ಎರಡು ಚಲನಚಿತ್ರಗಳನ್ನು ನಿರ್ಮಿಸಿದ ಪ್ರಶಸ್ತಿ ವಿಜೇತ. ಪ್ರಸ್ತುತ ರಾಜ್ಯ ನಾಟಕ ಅಕಾಡೆಮಿ ಅಧ್ಯಕ್ಷರಾಗಿರುವ ಇವರಿಂದ (ತಮ್ಮದೇ ಕೃತಿ) 'ಜೀಕೆ ಮಾಸ್ತರ ಪ್ರಣಯ ಪ್ರಸಂಗ' ಸೆಟ್ ಏರಲಿರುವ ಬಗ್ಗೆ ಹಿಂದೆಯೇ ಸುದ್ದಿಯಾಗಿದ್ದು; ಇದು ಜಾನಪದದ ಸೊಗಡಿಲ್ಲದ ಮಸಾಲೆ (ಕಮರ್ಷಿಯಲ್?) ಚಿತ್ರವಾಗಬಹುದೆ ?–ನೋಡೋಣ.

'ಬಂಡಾಯ' ಎಂದರೆ ಮುಖ್ಯವಾಗಿ ಕೇಳಿ ಬರುವ ಹೆಸರು ಬರಗೂರು ರಾಮಚಂದ್ರಪ್ಪ ಅವರದು. ಸಾಹಿತಿ, ವಿಮರ್ಶಕರಾದ ಇವರು ಈಗಾಗಲೇ 'ಒಂದು ಊರಿನ ಕತೆ' ಎಂಬ ಚಲನಚಿತ್ರ ನಿರ್ಮಿಸಿ ರಾಜ್ಯ ಪ್ರಶಸ್ತಿ ಪಡೆದಿದ್ದು; ಎರಡು ವರ್ಷಗಳ ಹಿಂದೆಯೇ ಇವರು ಚಿತ್ರಿಸಿದ ಮತ್ತೊಂದು ಚಿತ್ರ 'ಬೆಂಕಿ' ಇನ್ನೂ ನಿಗಿ ನಿಗಿ ಉರಿಯುತ್ತಿಲ್ಲ. ಗಾಂಧೀನಗರದ ಮಸಾಲೆ ಚಿತ್ರಗಳ ವಿತರಕರು ಈ ಚಿತ್ರ ಬಿಡುಗಡೆಯ ಬಗ್ಗೆ ತಣ್ಣಗಿದ್ದಾರೆ. ಬೆಂಕಿಯ ಕಾವು ಇವರಿಗೆ ತಟ್ಟಿದಂತಿಲ್ಲ. ಬರಗೂರರ 'ಬೆಂಕಿ'

ಯಾವಾಗ ಉರಿದೀತೋ.....ನೋಡೋಣ.

ಂ ಂ ಂ ಂ

ಯಾವೊಬ್ಬ ಲೇಖಕನನ್ನಾದರೂ ಒಂದು ರಾಜ್ಯ ಭಾಷೆಯ ಆಸ್ತಿ ಎಂದು ಹೇಳಿದರೆ; ಅದು ಎಷ್ಟೋ ಸಾಹಿತಿಗಳನ್ನು ಅವಮಾನಗೊಳಿಸಿದಂತೆ. ಇನ್ನೊಬ್ಬನನ್ನ ಕಡೆಗಣಿಸಿದಂತೆ. ಕನ್ನಡದ ಆಸ್ತಿಯೆಲ್ಲವನ್ನೂ ಮಾಸ್ತಿಯವರಿಗೆ ಧಾರೆಯೆರೆದ ನಾವೆಲ್ಲಾ ಮಹಾ ಮೂರ್ಖರಾಗಿದ್ದೇವೆ. ಅವರ ಜ್ಞಾನಪೀಠ ಪ್ರಶಸ್ತಿ ಕೃತಿ 'ಚಿಕವೀರರಾಜೇಂದ್ರ' ಕನ್ನಡ ಸಾಹಿತ್ಯಾಭಿಮಾನಿಗಳ (ಓದುಗರ) ಹೃದಯಕ್ಕೆ ಬೆಂಕಿ ತಾಕಿಸಿದೆ. ಮಿಡಿತ ಕ್ರಮೇಣ ತಣ್ಣಗಾಗಿದೆ (ಕೆಲವರ ಬಡಿತ ಹೆಚ್ಚಾಗಿರಲೂಬಹುದು). ಒಂದುವರೆ ಲಕ್ಷ ರೂಪಾಯಿ ಸಂಭಾವನೆ ಪಡೆದ ಮಾಸ್ತಿ. ಸ್ವಂತಕ್ಕೆ ಆಸ್ತಿಯನ್ನಂತೂ ಸೊಂಪಾಗಿ ಮಾಡಿಕೊಂಡಿದ್ದಾರೆ. ಕನ್ನಡದ ಓದುಗನ ಭಾವನೆಗಳಿಗೆ ಕುತೂಹಲಕ್ಕೆ ತಣ್ಣೀರೆರಚಿದ 'ಚಿಕವೀರರಾಜೇಂದ್ರ' ಸುಮಾರು ೧೮ ವರ್ಷಗಳ ನಂತರ ಮರುಮುದ್ರಣಗೊಂಡು ಮಾರುಕಟ್ಟೆಯಲ್ಲಿ ಕೊಳೆಯುತ್ತಿದೆ. ಇದರ ಬೆಲೆ ಕೇವಲ ಮೂವತ್ತು ರೂಪಾಯಿಗಳು !

ಸಾಧಾರಣ ಮುದ್ರಣದ (ವಿನ್ಯಾಸದ ಬಗ್ಗೆ ಮಾತನಾಡುವಂತೆಯೇ ಇಲ್ಲ !) ಈ ಪುಸ್ತಕದ ಬೆಲೆ ಹೆಚ್ಚಾದ್ದರಿಂದ ಯಾರೂ ಕೈಗೆತ್ತಿಕೊಳ್ಳದಂಥ ಸ್ಥಿತಿಯನ್ನು ಮಾಸ್ತಿಯವರೇ ಪ್ರಕಾಶಕರಾಗಿ ಕನ್ನಡಿಗರಿಗೆ ಕಾಣಿಕೆ ಕೊಟ್ಟಿದ್ದಾರೆ.

ತಮಗೆ ಬಂದ ಜ್ಞಾನಪೀಠದ ಸ್ವಲ್ಪ ಹಣವನ್ನು ಮಾಸ್ತಿಯವರು ಪುಸ್ತಕಗಳ ಪ್ರಕಟಣೆಗೆ ಧನ ಸಹಾಯ ರೂಪದಲ್ಲಿ ಕೊಡುವುದಾಗಿ ಹಿಂದೊಂದು ಸಮಾರಂಭದಲ್ಲಿ ಘೋಷಿಸಿದ್ದು ನೆನಪಿರುವ ನಮಗೆ. ಈ ಬೆಲೆಯಿಂದ ಬೆಚ್ಚಿಬೀಳುವಂತಾಗಿದೆ.

'ಚಿಕವೀರರಾಜೇಂದ್ರ' ಕೃತಿಯಿಂದ ಇತಿಹಾಸಕ್ಕೆ ಅಪಚಾರವಾಗಿದೆಯೆಂದು ಅಲ್ಲಲ್ಲೇ ಚರ್ಚೆಗಳಾಗುವ ಸಂದರ್ಭದಲ್ಲಿ; ಇಂಥ ದುಬಾರಿ ಪುಸ್ತಕ ಓದದಿದ್ದರೆ 'ಯಾವೊಬ್ಬ ಕನ್ನಡಿಗನಿಗೂ ಅನ್ಯಾಯ ಖಂಡಿತಾ ಆಗುವುದಿಲ್ಲ.'

# ನಮ್ಮೊಂದಿಗೆ ನೀವು ಹೇಳಿದ್ದು

ಪ್ರಿಯರೆ,

o 'ಅನ್ವೇಷಣೆ'ಗೆ ಹಾರ್ದಿಕ ಸ್ವಾಗತ. ಕೆಲವರಾದರೂ ಗಟ್ಟಿಯಾಗಿ ನಿಂತು ಪತ್ರಿಕೆ ಬಲಗೊಳಿಸಿರಿ.

ಧಾರವಾಡ–8 —ಚಂದ್ರಶೇಖರ ಪಾಟೀಲ

o o o

o ಪತ್ರಿಕೆ ತೂಕದ, ಜನಪರವಾದ ಲೇಖನಗಳನ್ನು ಒಳಗೊಂಡಿರಲಿ.

ಮಣಿಪಾಲ —ಡಾ॥ ಆರ್ಕೆ. ಮಣಿಪಾಲ

o o o

o ನವ್ಯೋತ್ತರ ಸಾಹಿತ್ಯದ ಬಗ್ಗೆ ಈಗ 'ಸಂಕ್ರಮಣ' ಮಾತ್ರ ಆಧಾರ ಸ್ತಂಭ. ನಿಮ್ಮ 'ಅನ್ವೇಷಣೆ' ಆ ದಿಟ್ಟಿನಲ್ಲಿ ಹೆಜ್ಜೆ ಇಡುತ್ತಿರುವುದರಿಂದ ಸಹಜವಾಗಿ ನನಗ ಸಂತೋಷವಾಗಿದೆ. (ಉತ್ಸಾಹ ಇಳಿಯದೆ, ಅತ್ಯಂತ ಕ್ಲಿಷ್ಟಕರ ಸಂದರ್ಭದಲ್ಲೂ ನಿಮ್ಮ ಪತ್ರಿಕೆ ಉಳಿಯಬೇಕು ಅಂತ ನನಗೆ ಆಸೆ ಇದೆ. ನೀವು ಒಪ್ಪಿದ ತತ್ವಗಳ ಬಗ್ಗೆ ನನಗೆ ನಂಬಿಕೆಯಿದೆ.)

ಮಂಗಳೂರು–574152 —ಪುರುಷೋತ್ತಮ ಬಿಳಿಮಲೆ

o o o

o ನಿಮ್ಮ ಸಾಹಸದಲ್ಲಿ ಎಚ್ಚರಿಕೆಯಿಂದ ಮುಂದುವರೆಯಿರಿ.

ಮೈಸೂರು–9 —ಭಗವಾನ್

o o o

o ಪತ್ರಿಕೆ ಯಾವ ಬಣಕ್ಕೂ ಸೇರದಿರಲಿ. ಬರೀ ಜಗಳ ನಮ್ಮ ಗುರಿ ಆಗಬಾರದಷ್ಟೇ ಬದುಕಿಗೆ ಪ್ರತಿಸ್ಪಂದಿತವಾಗುವ ಸದಭಿರುಚಿಯ ಸಾಹಿತ್ಯವನ್ನು ನಾವೆಲ್ಲ ಸೇರಿ ಬೆಳೆಸೋಣ. ನಾವೂ ಹಾಗಾದಾಗಲಷ್ಟೆ ಬೆಳೆದೇವು ಅಲ್ಲವೆ?

ಕಣಜನಹಳ್ಳಿ —ಕೆ. ಎನ್. ನಾಗರಾಜ್

o o o

o ಯಾವ ಪಂಥದ ಕಟ್ಟಿಗೂ ಬೀಳದೆ ನೀವು ಏನನ್ನು ಘೋಷಿಸಿಕೊಂಡಿದ್ದೀರೊ ಅಷ್ಟನ್ನು ಶ್ರದ್ಧೆಯಿಂದ ಅನುಷ್ಠಾನಕ್ಕೆ ತನ್ನಿ.

ಮೈಸೂರು–6 —ಡಾ॥ ಹಾ. ಮಾ. ನಾಯಕ್

o o o

o ತುಂಬಾ ಶ್ಲಾಘನೀಯವಾದ ಯೋಜನೆ. 'ಅನ್ವೇಷಣೆ' ಮುಕ್ತ ಚಿಂತನೆಗೆ ವಿಚಾರ ಕ್ರಾಂತಿಗೆ 'ಅಗ್ರ ವೇದಿಕೆ'ಯಾಗಲೆಂದು ಹಾರ್ದಿಕವಾಗಿ ಹಾರೈಸುತ್ತೇನೆ.

ಮೈಸೂರು–6 —ಡಾ॥ ಪೋಲಂಕಿ ರಾಮಮೂರ್ತಿ

o o o

o ಹೊಸ ಆಶಯಗಳನ್ನು ಇರಿಸಿ, ಅನೇಕ ಮಹತ್ವದ ಉದ್ದೇಶಗಳನ್ನು ಹೊಂದಿ ಹೊರ ಬರಲಿರುವ 'ಅನ್ವೇಷಣೆ' ಸಾಹಿತ್ಯಲೋಕದ ಹೊಸ ಅನ್ವೇಷಣೆಯಾಗಲಿ.

ಕಾಸರಗೋಡು (ಕೇರಳ ರಾಜ್ಯ) —ಕೆ. ಗೋವಿಂದ ಭಟ್, ಮೈರುಗಮನೆ

o ಇಂಥ ಕಾಲದಲ್ಲಿ ಸಾಹಿತ್ಯಿಕ ಪತ್ರಿಕೆಯೊಂದನ್ನು ಹೊರ ತರುತ್ತಿರುವುದಕ್ಕಾಗಿ ಶುಭಾಶಯಗಳು. ಹೊಸ ಪ್ರತಿಭೆಗೆ ಅವಕಾಶ ಸಿಗಲಿ. ಮುಖ್ಯರಿಗೇ ಮತ್ತೆ ಮಣೆ ಹಾಕುವ ಕೆಲಸ ಬೇಡ. ಮುಕ್ತ ವೇದಿಕೆಯೇ ಇರಲಿ.

ಕೊಪ್ಪಳ —ಅಲ್ಲಮಪ್ರಭು ಬೆಟ್ಟದೂರು

o o o

o 'ಅನ್ವೇಷಣೆ' ಒಳ್ಳೆಯ ಹೆಸರು. ನಾವುಗಳೆಲ್ಲ ಹುಡುಕುತ್ತಿದ್ದೇವಲ್ಲ—ಅದು ಪತ್ರಿಕೆಯ ಮೂಲಕ ಅಭಿವ್ಯಕ್ತಿಯಾಗಲು ಸೂಕ್ತ ಮಾಧ್ಯಮ.

ಮೈಸೂರು-1 —ನಾಗತಿಹಳ್ಳಿ ಚಂದ್ರಶೇಖರ

o o o

o ಹೊಸದಾಗಿ ಆರಂಭಿಸಲಿರುವ 'ಅನ್ವೇಷಣೆ' ಬಗ್ಗೆ ಅಭಿಮಾನ ಮೂಡಿದೆ.

ಮಡಕೇರಿ —ಕೆ. ಎಸ್. ಜಯಪ್ಪ

o o o

o ನೀವು ಮಾಡುತ್ತಿರುವ ಕೆಲಸ ನಿಜವಾಗಲೂ ಇವತ್ತಿನ ದೊಡ್ಡ ಕೊರತೆಯನ್ನು ತುಂಬುತ್ತಿರುವ ಪ್ರಥಮ ಹೆಜ್ಜೆ.

ಧಾರವಾಡ-580001 —ತೇಜಸ್ವಿ ಕಟ್ಟೀಮನಿ

o o o

o ನಿಮ್ಮ ಹೊಸ ಮಾಸಿಕ ಅಪೂರ್ವ 'ಅನ್ವೇಷಣೆ'ಯತ್ತ ಯಶಸ್ವಿಯಾಗಿ ಮುನ್ನಡೆಯಲೆಂದು ಆಶಿಸುವೆ.

ಮೈಸೂರು —ಮ.ನ.ಜ.

o o o

o 'ಅನ್ವೇಷಣೆ' ಹೊರಬರುತ್ತಲಿರುವುದು ನನಗೆ ಖುಷಿಯ ವಿಷಯ. ವೈಚಾರಿಕ ಸಂವಾದದಲ್ಲಿ ಸಾಹಿತ್ಯದ ವೈವಿಧ್ಯತೆಯಲ್ಲಿ ಪತ್ರಿಕೆ ಗಟ್ಟಿಯಾಗಿ ಬರಲೆಂದು ಹಾರೈಸುವೆ.

ಬೀದರ —ಡಾ॥ ಬಸವರಾಜ ಸಬರದ

o o o

o 'ಅನ್ವೇಷಣೆ' ನೀವು ಬಣ್ಣಿಸಿದ ರೀತಿಯಲ್ಲೇ ಹೊರಬರುವುದಾದರೆ ನಿಜಕ್ಕೂ ಒಂದು ಒಳ್ಳೆಯ ಪ್ರಯತ್ನವಾಗುತ್ತದೆ. ಇಂತಹ ಸಾಹಸವನ್ನು ಕೈಗೊಳ್ಳುತ್ತಿರುವುದಕ್ಕೆ ನಿಮಗೆ ನನ್ನ ಅಭಿನಂದನೆಗಳು.

ಮಂಗಳೂರು-577201 —ಎಚ್. ದುಂಡಿರಾಜ್

o o o

o ತಮ್ಮ ಧೈರ್ಯ ಮೆಚ್ಚಿದೆ. 'ಅನುಭವದ ಆಳ—ಮುಕ್ತ ಚರ್ಚೆಯ ವೇದಿಕೆ' —ಇವೆಲ್ಲಾ ಉಳಿಸಿಕೊಂಡು ನಿಮ್ಮ ಘನತೆಗೆ ತಕ್ಕಂತೆ ಪತ್ರಿಕೆ ನಡೆಸಿಕೊಂಡು ಹೋಗಿ.

ಆನಂದಪುರ, ಶಿವಮೊಗ್ಗ —ಎ. ಸಿ. ಮಹಂತಸ್ವಾಮಿ

o ಅನುಭವದ ಆಳ; ಚಿಂತನೆಯ ಎತ್ತರ: ಈ ಚಿರಂತನ ಮೌಲ್ಯಗಳು ಅನಿಕೇತನ ಚೇತನಗಳು. ಇಂಥ ಪ್ರಗತಿಪರ ಧೋರಣೆಯುಳ್ಳ ಅನ್ವೇಷಣೆಯ ಗುರಿಯೂ ಅನಿಕೇತನವಾಗಿರಲೆಂದು ನನ್ನ ಹಾರೈಕೆ.

ಮೈಸೂರು–9 —ನಟೇಶ್ ದೊಡ್ಡಟ್ಟಿ

o o o

o ಪತ್ರಿಕೆ ತರುವ ತಮ್ಮ ಸಾಹಸಕ್ಕೆ ಯಶ ದೊರೆಯಲಿ.

ಅಂಬಿಕಾನಗರ —ಹೂಲಿಶೇಖರ

o ಸಾಹಿತ್ಯ ಪತ್ರಿಕೆ ಹೊರ ತರುತ್ತಿರುವುದು ಸಂತೋಷದ ಸಂಗತಿ. ಹೃತ್ಪೂರ್ವಕ ಶುಭಾಶಯಗಳು. ಪತ್ರಿಕೆ ಚೆನ್ನಾಗಿ ತನ್ನಿ.

ಭದ್ರಾವತಿ —ಬಿ. ರಾಜಣ್ಣ

o o o

o ಈಗ ಬರುತ್ತಿರುವ ಸಾಹಿತ್ಯ ಪತ್ರಿಕೆಗಳಿಗಿಂತ ಬೇರೆ ರೀತಿಯೇ ಬರಲಿ. ನನ್ನ ಹಾಳು ಸೋಮಾರಿತನದಿಂದ ಪತ್ರ ತಡವಾಯಿತು ಕ್ಷಮಿಸಿ.

ಹೊಳಲ್ಕೆರೆ —ಚಂದ್ರಶೇಖರ ತಾಳ್ಯ

o o o

o ಕನ್ನಡದಲ್ಲಿ ಸಾಹಿತ್ಯ ಪತ್ರಿಕೆಗಳಿಗೆ ಭವಿಷ್ಯವಿದೆಯೆ ? ಸಾಹಿತ್ಯ ಪತ್ರಿಕೆ ತರೋದು ಸಾಹಸದ ಕೆಲಸ ಅಲ್ಲವೆ ?

ನವದೆಹಲಿ–13 —ಸಿ. ರಾಜಶೇಖರ

*ಪ್ರಿಯರೆ, ನಮಗೆ ಬಂದ ನೂರಾರು ಪತ್ರಗಳಲ್ಲಿ ಕೆಲವನ್ನು ಆಯ್ದು; ಕೊಟ್ಟ 'ಎಚ್ಚರಿಕೆ'ಯನ್ನೂ ಗಮನದಲ್ಲಿಟ್ಟುಕೊಂಡು ಪ್ರಕಟಿಸಿದ್ದೇವೆ. ಉಳಿದಂತೆ ಹಲವರು ನಮ್ಮ ಸಾಹಸದ ಬಗ್ಗೆಯೇ ಒತ್ತು ಕೊಟ್ಟಿದ್ದಾರೆ. ಸಂತೋಷ. ಅವರೆಲ್ಲರಿಗೂ ವಂದನೆಗಳು.

—ಸಂಪಾದಕ

## ಪುಸ್ತಕ ಸ್ವೀಕಾರ

- **ಜೂಲಿಯಸ್ ಸೀಸರ್ :** ಷೇಕ್ಸ್‌ಪಿಯರ್ (ಅನುವಾದ-ಭಗವಾನ್) ಪುಟ-152, ಬೆಲೆ 7 ರೂ. (ನಾಲ್ಕನೇ ಮುದ್ರಣ 1984)
- **ಶಂಕರಾಚಾರ್ಯರು ಮತ್ತು ಪ್ರತಿಗಾಮಿತನ :** ಭಗವಾನ್, ಪುಟ-40 ಬೆಲೆ 4 ರೂ. —ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು : ಮಹಿಮ ಪ್ರಕಾಶನ, ಕುವೆಂಪು ನಗರ, ಮೈಸೂರು-570009
- **ಕಪ್ಪು ನ್ಯಾಯ :** (ಕಥಾಸಂಕಲನ) ಲೇ. ಜಾಣಗೆರೆ ವೆಂಕಟರಾಮಯ್ಯ ಪುಟ-156, ಬೆಲೆ 13 ರೂ., ರಮ್ಯರೂಪ ಪ್ರಕಾಶನ, 920, 3ನೇ ಮುಖ್ಯ ರಸ್ತೆ, ವಿಜಯನಗರ, ಬೆಂಗಳೂರು-560040
- **ಸಿಡಿದವರು :** (ಕಥಾಸಂಕಲನ) ಲೇ-ಆರ್. ಜಿ. ಹಳ್ಳಿ ನಾಗರಾಜ್, ಪುಟ-128 ಬೆಲೆ 9 ರೂ., ಪ್ರ: ಅರುಣ ಯುವ ಲೇಖಕರ ಬಳಗ, 37/2-ಎ, 'ನಿಸರ್ಗ' ನಾಗರಬಾವಿ ರಸ್ತೆ, ವಿಜಯನಗರ-ಉತ್ತರ, ಬೆಂಗಳೂರು-560079
- **ಜಾಲ :** (ಕಥಾಸಂಕಲನ) ಲೇ-ಬಿ. ನಟೇಶ, ಪುಟ-94, ಬೆಲೆ 6 ರೂ. ಪ್ರ: ಬೃಂದಾವನ ಪ್ರಕಾಶನ, ಸರಸ್ವತಿಪುರಂ, ಮೈಸೂರು-9
- **ನೆತ್ತರಲ್ಲಿ ನೆಂದ ಹೂವು :** (ಕವನ ಸಂಕಲನ) ಲೇ-ಬರಗೂರು ರಾಮಚಂದ್ರಪ್ಪ ಪುಟ-60, ಬೆಲೆ 5 ರೂ., ಪ್ರ-ವೇದನಾ ಪ್ರಕಾಶನ, 30, 1ನೇ ಅಡ್ಡ ರಸ್ತೆ ಅಗ್ರಹಾರ ದಾಸರಹಳ್ಳಿ, ಬೆಂಗಳೂರು-560079
- **ಅದೋ ಜಗತ್ತಿನ ಅಕಾವ್ಯ :** (ಕವನ ಸಂಕಲನ) ಲೇ-ಜಂಬಣ್ಣ ಅಮರಚಿಂತ ಪುಟ-67, ಬೆಲೆ 8 ರೂ., ಪ್ರ: ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ ರಾಯಚೂರು-584101
- **ದಲಿತ ಕಿಡಿ :** (ಕವನ ಸಂಕಲನ) ಲೇ-ಗ. ಮ. ರಾಮಮೂರ್ತಿ, ಪುಟ-50 ಬೆಲೆ 5 ರೂ., ಪ್ರ: ಕ್ರಾಂತಿ ಕಂಠ ಪ್ರಕಾಶನ, 7ನೇ ಮೇನ್ ಹನುಮಂತನಗರ, ಬೆಂಗಳೂರು-560019
- **ಅಂತರ :** (ನೀಳ್ಗತೆ) ಲೇ-ಎನ್. ಶಂಕರ್, ಪುಟ-72, ಬೆಲೆ 5 ರೂ. ಪ್ರ: ಯುವಜನ ಪ್ರಕಾಶನ, 6, 7ನೇ ಕ್ರಾಸ್, ಕಾಂತರಾಜ್ ಅರಸು ರಸ್ತೆ ಸರಸ್ವತಿಪುರಂ, ಮೈಸೂರು-9
- **ಬೆಳದಿಂಗಳ ಜ್ಯೋತಿ :** (ಕಾದಂಬರಿ) ಲೇ-ಡಿ. ಎಸ್. ಕೃಷ್ಣಮೂರ್ತಿ ಪುಟ-200, ಬೆಲೆ ರೂ. 9, ಪ್ರ: ಜ್ಯೋತಿ ಪ್ರಕಾಶನ, ಎಂ-137 6ನೇ ಕ್ರಾಸ್, ಲಕ್ಷ್ಮೀನಾರಾಯಣಪುರ, ಬೆಂಗಳೂರು-560021
- **ಸೊಗಡೂರಿನ ಸಹೋದರರು :** (ನಾಟಕ) ಲೇ-ಅಕ್ಕೂರು ರಾಮೇಗೌಡ ಪುಟ-40, ಬೆಲೆ 2 ರೂ., ಪ್ರ: ವಿಶ್ವಪ್ರೇಮಿ ಪ್ರಕಾಶನ, ವಿಜಯನಗರ ಬೆಂಗಳೂರು-560040

---

***ನಮ್ಮ ಪತ್ರಿಕೆಯ ಸ್ವೀಕಾರ—ವಿಮರ್ಶೆ ವಿಭಾಗಕ್ಕೆ ಲೇಖಕರು/ಪ್ರಕಾಶಕರು ಪುಸ್ತಕಗಳನ್ನು ಕಳುಹಿಸುವಾಗ ಎರಡು ಪ್ರತಿಗಳನ್ನು ಕಳುಹಿಸಿ. —ಸಂಪಾದಕ**

## ಈ ಸಂಚಿಕೆಯ ಲೇಖಕರು....


- ಮನಜ (ಮ. ನ. ಜವರಯ್ಯ) ಕನ್ನಡ ಉಪನ್ಯಾಸಕ, ಭಾರತೀಯ ಭಾಷಾ ಸಂಸ್ಥಾನ, ಮಾನಸ ಗಂಗೋತ್ರಿ, ಮೈಸೂರು–570 006
- ಕೆ. ವಿಜಯಲಕ್ಷ್ಮಿ, ಕನ್ನಡ ಉಪನ್ಯಾಸಕಿ, ಸರ್ಕಾರಿ ಜೂ. ಕಾಲೇಜ್ ಬಾಗೇಪಲ್ಲಿ–561 207, ಕೋಲಾರ (ಜಿಲ್ಲೆ)
- ತೇಜಸ್ವಿ ಕಟ್ಟೀಮನಿ, ಹಿಂದಿ ವಿಭಾಗ, ಕರ್ನಾಟಕ ಕಾಲೇಜು ಧಾರವಾಡ–580 001
- ಹೆಚ್. ಎಸ್. ಶಿವಪ್ರಕಾಶ್, ಇಂಗ್ಲೀಷ್ ಉಪನ್ಯಾಸಕ, ಸರ್ಕಾರಿ ಗೃಹ ವಿಜ್ಞಾನ ಕಾಲೇಜು, ಅರಮನೆ ರಸ್ತೆ, ಬೆಂಗಳೂರು–560 001
- ರಾ. ಮೂರ್ತಿ, ನಂ. 24, ಗವಿಪುರಂ, ಹರಿಜನ ಕಾಲೋನಿ ಹನುಮಂತ ನಗರ, ಬೆಂಗಳೂರು–560 019
- ಆರ್. ಜಿ. ಹಳ್ಳಿ ನಾಗರಾಜ್, ಕನ್ನಡ ವಿಭಾಗ, 'ಹರಿಧ್ವನಂ' ವ್ಯಾಲಿ ಶಾಲೆ, 17 ಕಿ.ಮೀ. ಕನಕಪುರ ರಸ್ತೆ, ಬೆಂಗಳೂರು–560 062
- ಪ್ರೊ॥ ಬಿ. ವಿ. ವೀರಭದ್ರಪ್ಪ, ಮುಖ್ಯಸ್ಥರು, ಕನ್ನಡ ವಿಭಾಗ ಎ. ಆರ್. ಜಿ. ಕಾಲೇಜು, ದಾವಣಗೆರೆ–577 005
- ಜಾಣಗೆರೆ ವೆಂಕಟರಾಮಯ್ಯ, ಚೇತನಾ ಪ್ರಿಂಟರ್ಸ್, ಎಲ್–82 ಲಕ್ಷ್ಮೀನಾರಾಯಣಪುರ, ಬೆಂಗಳೂರು–560 021
- ಮೋಹನ್ ಜಿ. ಎನ್., ನಂ. 142, 5ನೇ ಬ್ಲಾಕ್, 69ನೇ ಕ್ರಾಸ್ ರಾಜಾಜಿನಗರ, ಬೆಂಗಳೂರು–560 010
- ತಿಮ್ಮನಹಳ್ಳಿ ವೇಣುಗೋಪಾಲ್, ತಿಮ್ಮನಹಳ್ಳಿ ಅಂಚೆ ಚಿಕ್ಕನಾಯಕನಹಳ್ಳಿ ತಾಲ್ಲೂಕು, ತುಮಕೂರು ಜಿಲ್ಲೆ
- ಡಿ. ಹೊಸಳ್ಳಿ ಶಿವು, ಬಿ.ಎಡ್. ವಿದ್ಯಾರ್ಥಿ, ಇನ್‌ಸ್ಟಿಟ್ಯೂಟ್ ಆಫ್ ಎಜುಕೇಷನ್, ಕುವೆಂಪು ನಗರ, ಮೈಸೂರು–570 009
- ಅರುಂಧತೇಜ, ಕೇರಾಫ್ 'ಅನ್ವೇಷಣೆ'



ಚಂದಾ ಹಣವನ್ನು ಚೆಕ್ ಮೂಲಕ ಕಳುಹಿಸುವವರು 21/– ರೂ. ಕಳುಹಿಸಬೇಕು.

ಎಂ.ಓ., ಡಿ.ಡಿ. ಮೂಲಕವೂ ಚಂದಾ ಕಳುಹಿಸಿಕೊಡಿ.

'ಅನ್ವೇಷಣೆ'ಗೆ ನಿಮ್ಮ ಸ್ನೇಹಿತರನ್ನೂ ಚಂದಾದಾರರನ್ನಾಗಿಸಿ.

ANVESHANE Kannada Fortnightly November 14, 1984
MAG(5) PRB-DECL-73/84-85

## ಮುಂದಿನ ಸಂಚಿಕೆಯಲ್ಲಿ......

- ಡಾ॥ ಪೋಲಂಕಿ ರಾಮಮೂರ್ತಿ : ಮಹಿಳಾ ಕವಿಗಳ ಅಜ್ಜಿ
- ಪೂರ್ಣಚಂದ್ರ ತೇಜಸ್ವಿ: ಕಾಮ-ರೂಪ-ಸೌಂದರ್ಯ (ಮೂ: ಡಿ.ಎಚ್. ಲಾರೆನ್ಸ್)
- ಡಾ॥ ಬಸವರಾಜ ಸಬರದ : ಕನ್ನಡದಲ್ಲಿ ಬಂಡಾಯ ಸಾಹಿತ್ಯ—ಲೇಖನಗಳು
- ಬರಗೂರು ರಾಮಚಂದ್ರಪ್ಪ, ಬಿ. ಟಿ. ಲಲಿತಾನಾಯಕ್, ಕೆ. ಎಸ್. ನಾಗರಾಜ್, ವೀಚಿ, ಹ. ಬ. ತಮ್ಮೇಗೌಡ, ನಾವರಸನ್, ಡಿ. ಹೊಸಳ್ಳಿ ಶಿವು—ಪದ್ಯಗಳು
- ನಟೇಶ ದೊಡ್ಡಟ್ಟಿ : ಕತೆ
- ಸಂಪಾದಕನ ಟಿಪ್ಪಣಿ : ಹೊಂಬಾಳೆ, ಹಾವುಗಳು--ಕ್ಯಾಸೆಟ್ ಕುರಿತು
- ಪುಸ್ತಕ ವಿಮರ್ಶೆ : ಡಾ॥ ಚೆನ್ನಣ್ಣ ವಾಲೀಕಾರ (ಎರಡು ಕಥಾಸಂಕಲನಗಳು) ಹ. ಸೋಮಶೇಖರ್ (ಭಗವಾನ್‌ರ 'ಬದಲಾವಣೆ')

---



---

Edited, Printed and Published by R. G. Halli Nagaraj, 37/2A, 'Nisarga', Nagarabavi Road, Vijayanagar North, Bangalore-79, and Printed at Chetana Printers, L.N. Puram, Bangalore-560021.